ಕನ್ನಡ ಕಾವ್ಯಮಾಲೆ—೪೧

# ಪ್ರೇಮಕಾಶ್ಮೀರ


ಕೆ. ವಿ. ಪುಟ್ಟಪ್ಪ.
ಕುವೆಂಪು,
K. V. Puttappa.





ಮೈಸೂರು
ಕಾವ್ಯಾಲಯ
೧೯೪೬

## —೯

ಮತ್ತೆ ಮತ್ತೆ ಉಕ್ಕುತಿದೆ ನಿನ್ನ ಮೇಲೆ ಮೋಹ ;
ಚಿತ್ತಮಧುವ ನೆಕ್ಕುತಿದೆ ದೇಹಕೆಳಸಿ ದೇಹ.
ದೇವರಿಚ್ಛೆಗಿದಿರೆ ಹೇಳು ನನ್ನ ನಿನ್ನ ಬೇಟ ?
ಅವನು ಒಪ್ಪುವನಕ ತಾಳಲೆಮ್ಮ ನೇಹ ನೋಟ :
ಅವನು ಒಪ್ಪಿದೊಲವೆ ನಮಗೆ ಬಾಳೊಳಮೃತದೂಟ .
ಅವನು ಒಪ್ಪದಿರಲು ಅದುವೆ ಮೃತ್ಯು ಕಾಳಕೂಟ
ಅವಸರವೇಕೊಲಿವುದೆಮಗೆ ಜನುಮ ಜನುಮದಾಟ !

# ಪ್ರೇಮಕಾಶ್ಮೀರ

## ಹೂವಿನ ಕೋರಿಕೆ

ಹೃದಯ ಕಮಲದಿ ಮಧುರ ಪ್ರೇಮಮಕರಂದವಿದೆ.
ಅಧರಚುಂಬನದಿಂದೆ ಸವಿಯದನು ಬಾ.
ಚಂಚಲತೆ ಏಕೆ, ಓ ಚಂಚರೀಕವೆ, ನಿನಗೆ?
ವಂಚನೆಯದಿಸಿತಿಲ್ಲ; ಬಾ, ಬೇಗ ಬಾ!

ಇರುಳೆಲ್ಲ ತಪಗೈದು ಎದೆಯ ಹೊಂಬಟ್ಟಲಲಿ,
ಅರುಣನುದಯಕೆ ನೀನು ಬರುವೆಯೆಂದು,
ಪ್ರಣಯ ರಸವನು ಎರೆದು, ಕಾದಿಹೆನು ತುಟಿ ತೆರೆದು,
ಪಾನಗೈ, ಓ ನನ್ನ ಭ್ರಮರ ಬಂಧು!

# ಚೌತಿಯ ಚಂದ್ರ

ಚೆನಕ ಚೌತಿಯ ಚೆಲುವ ಶಿಶು ಶಶಿ
    ಅಂತರಿಕ್ಷದ ವಕ್ಷದಿ
ಘನಪಯೋಧರ ಪಾನಸುಖವಿ
    ಶುಕ್ಲಸುಂದರ ಪಕ್ಷದಿ

[illegible]ರಿಲಗೊಂಚಲ ತೆರನ ತೆನೆಯಾ
    ಕೃತ್ತಿಕೆಯ ಬೆಳ ಹೊನ್ನನು
ಸವರಿ ಕವರಲು ಬಂದ ಭಾದ್ರನ,
ಪಿಡಿಪು ಮರೆಯಪ್ಪಂತೆ ಪಿಡಿದಿಹ
    ಕೈಯ ಕುಡುಗೋಲನ್ನನು

ರತಿಯನೆಚ್ಚರಗೊಳಿಸಿ ಯತಿಯಲಿ
    ಮದನ ಕಿವಿವರೆಗೆಳೆದನು,
ಜೊನ್ನವಿಲ್ಲನ ಜೊನ್ನಸಾರಿಯು
    ವೃತ್ತವಾದುದು ಆ ಧನು
ಶಿವನ ಹೃದಯವ ಹೊಕ್ಕ ಹೂವಿನ
    ಸರಳು ಸಂದುದು ಬೇಳ್ವಿಗ,
ಭಸ್ಮವಾದನು ಅತನು, ಬಾಸಿನ
    ಬೂದಿಮುಗಿಲಿನ ಬಾಳ್ವಿಗ,
ವ್ಯೋಮಕೇಶನ ಜಟೆಗೆ ಸಿಲ್ಕಿತು
    ವೃತ್ತಗೊಂಡಾ ಜ್ಯಾಧನು
[illegible] ಅದ ಮೇಲೆ ತೇಲಿದೆ
    ಚೆನಕ ಚೌತಿಯ ಚಂದ್ರನು!

# ಶಿಶು

ಹಸುರಿನುಯ್ಯಾಲೆಯಲಿ
ಬಿಸಿಲು ತೂಗಾಡುತಿದೆ ;
ಚುಕ್ಕಿಯುದ್ಯಾನದಲಿ
ಹಕ್ಕಿ ಹಾರಾಡುತಿದೆ ;

ಒಡಲವೀಣೆಯ ನಡುವೆ
ನುಡಿಯಿಲ್ಲದಿಂಚರಕೆ
ಮೊದಲ ತೊದಲಿನ ತುಟಿಯ
ಕೆಂಪು ತೆರೆಯುತಿದೆ !

ಮೈವೆತ್ತ ಗಾನಕ್ಕೆ
ಸುಖರಸದ ತಾನಕ್ಕೆ
ತನ್ನ ಸಂತಾನಕ್ಕೆ
ಸೃಷ್ಟಿ ಮರೆಯುತಿದೆ !

# ಸಂಸಾರ ಸಂಹಿತೆ

ಜನ ನೆರೆದು, ಸಭೆಸೇರಿ, ಕಯ್ಯ ಚಪ್ಪಳೆಯಿಕ್ಕಿ,
ಕೊರಳಿಗುರುಳಿಪ ಹಾರ ನನಗೆ ನಿಸ್ಸಾರ,
ತಳಿರ ಬೆರಳಿನ ಕಯ್ಯ ಕಂದನಾ ನಳಿದೋಳು
ಕೊರಳನಪ್ಪಿದರೆನಗೆ ಸಗ್ಗಕ್ಕೆ ಸಾರ:
ಸಾಮಾನ್ಯತಾ ಸುಖವೆ ಶಾಂತಿ ಜೀವಾಧಾರ,
ಸಾಮಾನ್ಯತೆಯೆ ಜಗನ್ಮಾನ್ಯತಾ ಸಂಸಾರ!

# ಗೋಪಿ

ಸೊಬಗನೇಕೆ ಹಳಿಯುತಿರುವೆ,
ಬಣಗು ಬೈರಾಗಿ ?
ಸೊಬಗು ದೇವನಂಶವಲ್ತೆ,
ಹೇಳು, ಓ ತ್ಯಾಗಿ ?

ನಿರಾಕಾರವಾದುದೆಮ್ಮ
ಮನಕೆ ಬರಿಯ ಸೊನ್ನೆಬೊಮ್ಮ !
ತುದಿಯೊಳೆಮಗೆ ಬರಲು ಸಾವು
ನಿರಾಕಾರವಾಗೆ ನಾವು,
ಸೊಬಗೆ ನಿರಾಕಾರವಾಗಿ
ದೇವನಹುದು ಕಣಾ, ಚಾಗಿ !

ಪರಮಪುರುಷ ಸೃಷ್ಟಿರೂಪಿ ;
ಅವನ ಹಳಿಯುವವನೆ ಪಾಪಿ !
ಗಿಡಮರಗಳು ಹೂವು ಬಳ್ಳಿ
ಮೆರೆವ ಗಿರಿಯ ನೆತ್ತಿಯಲ್ಲಿ
ನೇಸರುದಯವಾಗುತಿಹನು,
ನೋಡು ಬಾ ; ದೇವನವನು !

ನಗಪರಿವೃತ ಕಂದರದಲಿ
ತಲೆಯನೊಲೆವ ಗದ್ದೆಗಳಲಿ
ಭಾವಲಹರಿಗಳನೆ ಹೋಲಿ
ಕೀಡುತಲಿದೆ ಮುದ್ದುಗಾಳಿ :

ಹಸುರ ನಡುವೆ ಬಿಳಿಯ ಚುಕ್ಕಿ,
ನೋಡು ಬಾ ! ಬೆಳ್ಳಿಹಕ್ಕಿ !

ಬಯಲಿನಲ್ಲಿ ಹಸುರುಮೇವು
ಮೇಯುತಿರುವ ಹಿಂಡುಗೋವು
ಚಲನೆಯಿಲ್ಲವೆನ್ನುವಂತೆ
ಚಲಿಸುತಿಹವು ಚಿತ್ರದಂತೆ
ಆಲಿಸದೋ—ನೂರು ಪ್ರಾಣಿ
ಆದರೇನು ?—ಒಂದ ವಾಣಿ

ದನವ ಕಾವ ಚೆಲುವುಹೆಣ್ಣು
ಆವಳ ಕೂದಲವಳ ಕಣ್ಣು,
ಮೂಗು, ಬಾಯಿ, ಗಲ್ಲ, ಕೆನ್ನೆ
ರಾಧೆಗೇನು ಕಡಿಮೆ ಎನ್ನೆ !
ನೂರು ವೇಷ, ನೂರುಭಾವ,
ನೂರು ರೀತಿ ಬಹನೆ ದೇವ !

# ಒಬ್ಬ ತಾಯಿಗೆ

ಜಗದೀಶ್ವರನೆ ವಿಶ್ವಸಂಸಾರಿಯಾಗಿರಲು
ಸಂಸಾರ ಪಾಶವೆಂದೆನಬೇಡವ್ವೆ.
ಹುಟ್ಟುಹಾಕಲು ನಿನಗೆ ಬಾರದಿರೆ, ಕೂಡದಿರೆ,
ಬರಿದೆ ನೀಂ ದೋಣಿಯನು ಶಪಿಸಬೇಡ್ವೆ!

ಮಾಡುವುದನೆಲ್ಲ ತನ್ನಾತ್ಮಸಾಧನೆಯೆಂದು
ಕರ್ಮಗೈ; ಅದುವೆ ಪೂಜೆಯ ಮರ್ಮವ್ವೆ.
ಶಿವನ ಕಾರ್ಯದೊಳಾವು ಶಿರಬಾಗಿ ನೆರವಾಗೆ
ನಮಗದುವೆ ಪರಮ ಪಾವನ ಧರ್ಮವ್ವೆ.

ಹಸುಳೆಯನು ಮೀಯಿಸಲು ಹರನಿಗಭಿಷೇಕವದ
ಶಿಶುವಿಗೂಡಿಸೆ ಶಿವಗೆ ನೈವೇದ್ಯವ್ವೆ!
ಕಂದನಲಿ ಶಿವನ ಕಾಣುವ ಬಂಧನವೆ ಮುಕ್ತಿ;
ತಪಕೊಲ್ಲದದು ತಾಯ್ತನಕೆ ಸಾಧ್ಯವ್ವೆ!

# ಬಿದಿಗೆಯ ಚಂದ್ರ

ಪಡುವಣ ಬಾನಿನ ನೀಲಿಯ ಹಣೆಯಲಿ
ಬಿದಿಗೆಯ ರೇಖಾಚಂದ್ರಮನು
ನವವಧು ವದನದ ಮುಗುಳ್ನಗೆಯಂದದಿ
ಮೆರೆವನು ಮೋಹವನು

ನೈಶಾಕಾಶದ ಚಿತ್ತರದೆದೆಯಲಿ
ಕಿಡಿಕಿಡಿ ಕೆತ್ತಿದೆ ತಾರಾಳಿ,
ತರುವನ ಗಿರಿಧರೆ ಮೌನದಿ ಮುಳುಗಿವೆ
ಭಾವ ಸಮಾಧಿಯಲಿ!

ಉದ್ವೇಗವನರಿಯದ ಸಂತೃಪ್ತಿಯ
ನಿರುಪಮ ಔದಾಸೀನ್ಯದಲಿ
ತ್ರಿಜಗಜ್ಜೀವನವಾಹಿನಿ ಹರಿದಿದ
ಸುಖಮಯ ಸುಪ್ತಿಯಲಿ

ಮೌನದ ಮಡಿಲಲಿ, ಹಸುರು ಹಸಲೆಯಲಿ
ಮಲಗಿರುವೆನು ನಾನೇಕಾಂಗಿ,
ನೀನೆಂದಿಗೆ ಐತರುವೆಯೊ ಎಂಬುವ
ಚಿಂತೆಯೆ ನಾನಾಗಿ

# ವಿರಹಿ

ಕಾದೆ ಕಾದೆ ಕಾದೆ ಕಾದೆ
ನೀನು ಮಾತ್ರ ಬರದೆ ಹೋದೆ,
ಓ ಎನ್ನ ರಾಧೆ! ॥ಪ॥
ಮನದಿ ವಿರಹದುರಿಯು ತೋರೆ
ಕ್ಷಣವದೊಂದು ಯುಗವ ಮೀರೆ
ಓ ಎನ್ನ ನೀರೆ! ॥ಅ. ಪ॥

ನವವಸಂತನಿಳೆಗೆ ಬಂದು
ಕುಸುಮ ನಿವೇದನವ ತಂದು
ವಿಹಂಗ ಗಾನದಿ
ಪ್ರೇಮಗೀತೆಗಳನು ಹಾಡಿ
ಮಥಿಸಲೆದೆಯ ನೃತ್ಯವಾಡಿ,
ತಾನತಾನದಿ ;

ದೂರದುದಯ ಗಗನದಲ್ಲಿ
ಕುಂಕುಮ ಧೂಳಿಯನೆ ಚೆಲ್ಲಿ
ಉಷೆಯ ಮೂರುತಿ
ಜಗಕೆ ಜೀವರಸವ ತರಲು,
ಶಿಖರವನವನೇರಿ ಬರಲು
ಅರುಣ ಸಾರಥಿ ;

ಪೂರ್ಣ ಸುಧಾಕರನ ಕಾಂತಿ
ಬನವ ತೊಯ್ಯಲಿಳೆಯ ಶಾಂತಿ
ಮೇರೆವರಿಯಲು,

ಕಾಣದುಲಿವ ತೇನೆಹಕ್ಕಿ
ಗಾನಮೋಘದಲ್ಲಿ ಸಿಕ್ಕಿ
ಸೋನೆಗರೆಯಲು ,

ನಭವನೆಲ್ಲ ಮುಚ್ಚಿ ಮುಗಿಲು
ಸೋನೆ ಮಳೆಯ ಸುರಿವ ಹಗಲು
ಜೊತೆಯದಿಲ್ಲದ,
ಖಿನ್ನಮನವ ನಗಿಸಿ ನಲಿಸಿ,
'ರನ್ನ' ಎಂದು ಎದೆಯನೊಲಿಸಿ
ಒಲಿವರಿಲ್ಲದ

ಪರ್ವತ ವನ ಕಂದರದಲಿ
ಸರೋವರದ ತೀರಗಳಲಿ
ನಿನ್ನನರಸಿದ ,
ಒಮ್ಮೆ ಮೊರೆದು, ಒಮ್ಮೆ ಜರೆದು,
ಒಮ್ಮೆ ನಿನ್ನ ಕೂಗಿ ಕರೆದು
ಬರಿದೆ ಚರಿಸಿದೆ

ಯಾವ ಯಮುನೆಯರೆಯ ಮೇಲೆ
ಕುಳಿತು ಹಾಡುತಿರುವೆ, ಬಾಲೆ ?
ಓ ಎಲ್ಲಿ ಹೋದೆ ?
ಯಮುನೆಯಾಗಿ ಹರಿದು ಬರುವೆ,
ತೆರೆಯ ಮುತ್ತು ಕೊಟ್ಟು ಕರೆವೆ,
ಬಾ ಎನ್ನ ರಾಧೆ !

# ಸಿದ್ಧಿ

ನಿನ್ನೊಂದು ಚೆಂದುಟಿಯು ಸವಿಮುತ್ತಿಗೆಂದು ನಾ
ಜನ್ಮ ಜನ್ಮಗಳೆತ್ತಿ ಬಯಸಿ ಬಂದೆ ;
ಯುಗಯುಗಾಂತರದಲ್ಲಿ ಹುಡುಕಿ ತೊಳಲುತ ಬಳಲಿ
ಕಡೆಗಿಂದು ನಿಂದಿಹೆನು ನಿನ್ನ ಮುಂದೆ.

ನನ್ನಂತೆಯೇ ನೀನು ಹುಡುಕಿ ನೊಂದಿಹೆ, ಬಲ್ಲೆ ;
ಸಾರುತಿವೆ ನಿನ್ನ ಕಣ್ಣಿನ ಪ್ರಣಯಕಾಂತಿ !
ಕಲ್ಪಾಂತರದ ಹಿರಿಯ ಬಯಕೆ ಫಲಿಸಲಿ ಇಂದು :
ಸ್ನೇಹಮೋಹದ ಮುತ್ತನಿಡು-- ಓ ಎನ್ನ ಶಾಂತಿ !

# ರಾಧೆ ನನ್ನ ಕೆನ್ನೆಗೆ

ಹೊಮ್ಮಿದೆಳೆಯ ಗರುಕೆ ಮೇಲೆ
ಚಿಮ್ಮಿ ಹುಲ್ಲೆಮರಿಯವೋಲೆ
ನನ್ನನೊಪ್ಪಿ ರಾಧೆಯಪ್ಪಿ
ಚುಂಬಿಸಿದಳು ಕೆನ್ನೆಗೆ !

ಎಲ್ಲ ಬರೆದುಕೊಳುವ ವಿಧಿ
(ನಲ್ಲೆಗಾಣ್ಕೆ ಪುಣ್ಯನಿಧಿ !)
ನಿನಗೆ ನನ್ನದೊಂದು ಮೊರೆ
ಮುತ್ತುಕೊಟ್ಟುದನೂ ಬರೆ,
'ರಾ-ಧೆ ನ-ನ್ನ ಕೆ-ನ್ನೆ-ಗೆ'

"ಇವನು ಕೋಪಿ, ಇವನು ಪಾಪಿ"
ಸುಳ್ಳನೆ ಬರೆ, ನಿನಗೆ ಮಾಫಿ !
"ಇವಗೆ ಮೋಹ, ಭ್ರಾಂತಿ, ಭ್ರಮೆ !
ಹ್ಞೊ ಆಗಲಿ ! ಅದಕೂ ಕ್ಷಮೆ !
ಆದರೆನ್ನದೊಂದೆ ಮೊರೆ
ಮುತ್ತುಕೊಟ್ಟುದನೂ ಬರೆ,
ರಾಧೆ ನನ್ನ ಕೆನ್ನೆಗೆ !

ಲೀ ಹಂಟ್ ಕವಿಯ 'Rondeau' ಎಂಬ ಕವನದ
ಭಾವಾನುಕರಣ

# ನಿರೀಕ್ಷೆ

ಬರುವನಿಂದು ಮಮ ಹೃದಯದ
ಅಮೃತ ಮೂರುತಿ ;
ಬರುವನಿಂದು ಮಮ ಜೀವದ
ಮಂಗಳಾರತಿ !
ಕೆಳದಿಯೆ, ಬಾ, ಸಿಂಗರಗೆಯ್ ;
ಹೊಸ ಹೂವಿನ ಮಾಲೆಯ ನೆಯ್
ಮೋಹದ ಸೊಡರಾಗಲಿ ಮೆಯ್ !
'ಮದನನ ಸತಿ, ಸುಂದರ ರತಿ,
ಬಾರೆನ್ನಲಿ ಪ್ರಿಯಪತಿ !'
ಮೈಚೆಲುವಿನ ಹೊಳೆನೀರಲಿ
ಮಿಾಯಲಿ ಮಧುಸಂಸ್ಕೃತಿ !

# ಹೃದಯ ಮಂದಿರದಲ್ಲಿ

ಹೃದಯ ಮಂದಿರದಲ್ಲಿ ಮಧುರ ಪ್ರಾಣೇಶನಿಗೆ
ಪ್ರಣಯದಾರತಿ ಪೂಜಯಾಗುತಿದ ಬಾ!
ಕಂಬನಿಯ ಚುಂಬನದ ಪ್ರೇಮಾಂಬುಜಾತದಲಿ
ತುಂಬಿ ಜೀವವನೆ ಮುಡುಪರ್ಪಿಸಲು ತಾ!

ರಾಗವೇ ವೈರಾಗ್ಯವಪ್ಪುದಲ್ಲಿ!
ಭೋಗವೇ ತ್ಯಾಗವಾಗಿರುವುದಲ್ಲಿ!
ಮೋಹವೇ ಭಕ್ತಿಯಾಗಿರುವುದಲ್ಲಿ!
ಪ್ರೇಮವೇ ಮುಕ್ತಿಯಂತೆಸೆವುದಲ್ಲಿ

# ಏಕಾಂತವಿದು ಸಹಿಸಲಾರದಿದೆ

ಏಕಾಂತವಿದು ಸಹಿಸಲಾರದಿದೆ; ಬಾರಯ್ಯ,
ಸೌಂದರ್ಯ ಮೂರುತಿಯೆ, ಹೃದಯವನಕೆ.
ಬರಲು ನೀಂ ಚೈತ್ರಪಕ್ಷಿಯ ಗಾನ ಬಂದಂತೆ
ನಂದನಾನಂದವೈತಹುದು ಮನಕೆ!

ಕೆನ್ನೆ ಕೆಂದಳಿರ ತಾ, ನಗೆಯ ನಲ್ಮುಗುಳ ತಾ,
ತೊಂಡೆವಣ್ದುಟಿಯ ತಾ, ಲತೆಮೆಯ್ಯ ತಾ!
ರವಿಯುದಯದಂತೆ ಬಾ, ಶಶಿಯುದಯದಂತೆ ಬಾ,
ಯೌವನೋದಯದಂತೆ ಬಾರಯ್ಯ ಬಾ!

ಮೌನವಿದು ಬಿರಿದೊಡೆದು ಬಹುಗಾನ ತಾನಾಗಿ
ಪ್ರವಹಿಸಲಿ ಸುಪ್ರೇಮುದಮರಸಿಂಧು!
ನಿಶ್ಚಲತೆ ನರ್ತಿಸಲಿ ಪ್ರೇಮತಾಂಡವನಾಗಿ;
ಬಾರಯ್ಯ, ಚಿರ ರಸ ನವೀನ ಬಂಧು!

# ಪ್ರೇಯಸಿ

ಯಾವ ದೂರದ ಸ್ವಪ್ನಸ್ವರ್ಗದಲಿ, ಕಲ್ಪನೆಯ
ವರ್ಣಮಯ ನಂದನೋದ್ಯಾನದಲಿ, ಕಲ್ಪತರು
ತಲದಲ್ಲಿ ಹರಿವ ಮಂದಾಕಿನಿಯ ತೀರದಲಿ
ರಾಜಿಸುವ ಪಳುಕುವಾಸರೆಯಾಸನದ ಮೇಲೆ
ಪ್ರೇಮಿಕ ಧ್ಯಾನದಲಿ ತಲ್ಲೀನಳಾಗಿರುವೆ,
ಓ ಎನ್ನ ಜೀವನ ಪ್ರೇಯಸಿಯೆ ? ಸುರನದಿಯು
ಬೆಳ್ನಗೆಯು ಬೆಳ್ನೊರೆಯ ಶಿರದ ತೆರೆಯೊಲು ಬಂದು
ಪದುಮಗಳ ಸೋಂಕಿನಲಿ ಪದುಮವಾಗಿಹ ನಿನ್ನ
ಮೆಲ್ಲಡಿಗಳನು ಮುಟ್ಟಿ ಮುತ್ತಿಟ್ಟು ಹರುಷದಲಿ
ಹರಿಯುತಿದೆ ಮುಂದೆ, ಓ ಎನ್ನಿನಿಯ ರೂಪಸಿಯೆ !
ಪುಷ್ಪಪರಿಮಳವೆತ್ತ ಮಂದಪವನನು ನಿನ್ನ
ಕೇಶರಾಶಿಯ ಕೆದರಲೋಸುಗವೆ ಲೀಲೆಯಲಿ
ಉನ್ಮತ್ತನಾಗಿಹನು, ಮಾನಸಿಕ ಸುಂದರಿಯೆ !
ಹೊಂಗರಿಯ ಹಕ್ಕಿಗಳು ನಿನ್ನ ಸುತ್ತಲು ಹಾರಿ
ಇನಿದನಿಯ ಬೀರುತಿವೆ ಮರಬಳ್ಳಿಗಳು ನಿನ್ನ
ಚರಣತಲದಲಿ ತಮ್ಮ ಕುಸುಮನೈವೇದ್ಯವನು
ಅನವರತ ಅರ್ಪಿಸಿವೆ ಓ ಎನ್ನ ಮೋಹಿನಿಯೆ,
ಎಲ್ಲ ಋತುಗಳ ಎಲ್ಲ ಬಣ್ಣಗಳು, ನೋಡಲ್ಲಿ,
ನಿನ್ನ ವಸನಾಂಚಲದಿ ಇನಿತು ತಾವನು ಬೇಡಿ
ಕಾದಿವೆ ತಪಂಗೈದು ! .

ಇಂತಿರಲು ನೀನಲ್ಲಿ,
ಆ ದೂರದಾ ಸ್ವಪ್ನಸ್ವರ್ಗದಲಿ, ಮರ್ತ್ಯಕ್ಕೆ

ನಿಲುಕದ ಅತೀತದಲಿ ; ನಾನಿಲ್ಲಿ ಮರ್ತ್ಯದಲಿ,
ಈ ಸ್ಥೂಲ ಭುವನದಲಿ, ಬಂಧನದ ಭವನದಲಿ
ಸೆರೆಯಾಗಿ ಕ್ರಂದಿಸುತ್ತಿಹೆ ನಿನ್ನ ಹಾರೈಸಿ,
ಓ ಎನ್ನ ಜೀವನ ಪ್ರೇಯಸಿಯೆ, ರೂಪಸಿಯೆ,
ಮೋಹಿನಿಯೆ, ಮಾಧುರಿಯೆ, ಮಾನಸಿಕ ಸುಂದರಿಯೆ !
ನೀನಿಲ್ಲದೀ ತಿರೆಯು ಜಡವಾಗಿ ಸೆರೆಯಾಗಿ
ಹೊರೆಯಾಗಿ ಬರಿಯ ಮರುಧರೆಯಾಗಿ ತೋರುತಿದೆ
ವಿರಹದಲಿ ನನ್ನೆದೆಯು ಬಿರಿಯುತಿದೆ ; ಕಣ್ಣೀರು
ಸುರಿಯುತಿದೆ ; ಮೈಗೆ ಉರಿಹೊತ್ತುತಿದೆ. ನೀನಿನ್ನು
ಬಾರದಿರೆ ಭಸ್ಮವಾಗುವೆ ನಾನು. ಆ ಬೂದಿ
ಗಾಳಿಯಲಿ ತೇಲಿ, ನದಿಯಲಿ ಹರಿದು ನಿನ್ನೆಡೆಗೆ.
ನಿನ್ನ ತಪವನು ಕೆಡಿಸಿ ಎಂದಿಗೂ ಮುಗಿಯದಿಹ
ಸೀಮೆಯಿಲ್ಲದ ರೋದನಕೆ ನಿನ್ನ ತಳ್ಳುವುದು.—
ನಿನ್ನ ಧ್ಯಾನವು ಸಾಕು ; ಬಾ ಬೇಗ ಮರ್ತ್ಯಕ್ಕೆ !
ಬಂದೆನ್ನನಪ್ಪು ! ತುಟಿಯೊತ್ತಿನಲಿ ತವಿಸೆನ್ನ
ಎದೆಯ ಬಿರುಬೇಗೆಯನು ! ನೀನು ಬರಲಾರದಿರೆ,
ನಿನ್ನ ಹಿರಿಮೆಗೆ ಕಿರಿಯ ತಿರೆ ಸಾಲದಾಗುವೊಡೆ
ನನ್ನನಲ್ಲಿಗೆ ಕರೆದುಕೋ—ಮುತ್ತನಿಡು, ದೇವಿ !
ಬರಲಿ ಕಾಮನ ಬಿಲ್ಲು, ಹೋಗಲಿ ಹರಿದು ಕಾವಿ !

# ನೀನೆನ್ನ ಬಳಿಯಿರಲು

ನೀನನ್ನ ಬಳಿಯಿರಲು ಜಗ ತುಂಬಿತುಳುಕುವುದು ,
ನೀನು ಹೋದರೆ ದೂರ ಶೂನ್ಯವಾಗುವುದು
ನೀನೆನ್ನ ಜೀವನದ ಸರ್ವಸ್ವವಾಗಿರುವೆ ,
ಓ ನನ್ನ ಪ್ರಿಯ ಮೂರ್ತಿ, ಎದೆಗೆ ಬಾರೈ
ಬಿಸಿಲುರಿವ ಮರುಭೂಮಿಯಂದದಲಿ ನನ್ನೆದಯು
ವಿರಹದಿಂದುರಿದುರಿದು ಯೋಗಕೆಳಸುವುದು ,
ಮಳೆಗರೆದು, ತಂಪಿತ್ತು, ಪರಿಹರಿಸಿ ಬೇಗೆಯನು,
ಪ್ರೇಮತೋಯದ ಮೂರ್ತಿ, ಎದಗೆ ಬಾರೈ
ಅಗಲಿಕೆಯ ಸಹಿಸಲಾರೆನು ನಾನು , ನಿನ್ನನ್ನೆ
ಹಗಲಿರುಳು ನೆನೆದು ಬಗೆ ಕುದಿದು ಬೇಯುವುದು
ಓ ನನ್ನ ಆನಂದ ಸತ್ಯಸುಂದರ ಮೂರ್ತಿ,
ಶೂನ್ಯವನು ಪೂರ್ಣಗೈ ! ಎದಗ ಬಾರೈ !

# ಆತ್ಮವಿಕಸನವಲ್ತೆ ಮಿಲನಸಾರ?

ದಮ್ಮಯ್ಯ, ಬಾ ಬೇಗ, ಓ ಎನ್ನ ಹೃದಯೇಶ,
ಕಾದು ದಣಿದೆನು; ಇನ್ನು ತಡೆಯಲಾರೆ.
ಹರಿಯುತಿಹ ನರಗಳಲಿ ಬೆಂಕಿಯುರಿ; ಹರಣವನೆ
ಕೊರೆದಿದೆ ನಿರೀಕ್ಷಣೆಯ ನಿಶಿತಧಾರೆ.
ನೀನು ತಡಮಾಡಿದರೆ ಬಾಳೆಲ್ಲ ಸಂಕುಚಿಸಿ,
ಕುಗ್ಗಿಸುವುದಾತ್ಮವನು ವಿರಹಭಾರ.
ನೀನು ಬಂದರೆ ಬಳಿಗೆ ಬಾಳರಳಿ ಹಬ್ಬುವುದು;
ಆತ್ಮವಿಕಸನವಲ್ತೆ ಮಿಲನ ಸಾರ?

# ಆತ್ಮನಿವೇದನ

‘ ಬೃಂದಾವನಕೆ ಹಾಲನು ಮಾರಲು
ಹೋಗುವ ಬಾರೇ ಬೇಗ, ಸಖಿ ! ’
‘ ಬೃಂದಾವನದಿ ಹಾಲನುಕೊಳ್ಳುವ–
ರಾರಿಹರೇ ಹೇಳಿಂದುಮುಖಿ ? ’

‘ ಗೋವನು ಕಾಯುವ ಗೋವಿಂದನಿಹನೇ;
ಹಾಲನು ಕೊಳ್ಳುವ, ಕೇಳೆ ಸಖಿ !
ಚಿನ್ನವ ಕೊಡನೇ, ರನ್ನವ ಕೊಡನೇ,
ತನ್ನನೆ ಕೊಡುವನು ಬಾರೆ, ಸಖಿ !

ಕಣ್ಣನು ಮೋಹಿಪ ಪೀತಾಂಬರವನು,
ಬಣ್ಣದ ಬಳೆಗಳ ಧರಿಸು, ಸಖಿ,
ಚನ್ನನ ಮೋಹಿಸುವೆದೆಯನು ಹಾರವು
ಸಿಂಗರಿಸಲಿ, ಹೇ ನಳಿನಮುಖಿ !

ಝಣಝಣವೆನ್ನಲಿ ನೂಪುರ, ಗೋಪಿ,
ಹಣೆಯೊಳು ಚಂದನ ರಂಜಿಸಲಿ !
ತೊಂಡೆಯ ಹಣ್ಣನು ತುಟಿಗಳು ನಗಲಿ,
ವದನವು ವಿರಾರಲಿ ತಾವರೆಯ !

ಯಮುನಾತೀರದೊಳಲೆಯುವ ಬಾರೇ
ಹಾಲುಬೇಕೆ ಹಾಲೆಂದು ಸಖಿ,
ಹಾಲನು ಮಾರುವ ನೆವದಿಂದ ಹರಿಯ
ಮೋಹಿಸಿ ಕರೆಯುವ ಬಾರೆ, ಸಖಿ ! ’

ಹಾಲ ನಿವೇದಿಸಿ ಆತ್ಮವನರ್ಪಿಸಿ
ಮುಕ್ತಿಯ ಹೊಂದುವ, ಸೌಮ್ಯಮುಖಿ !
ಹಾಲನು ಮಾರಿ ಹರಿಯನು ಕೊಳ್ಳುವ
ನಾವೇ ಧನ್ಯರು, ಕಮಲಮುಖಿ !

ನಮ್ಮಾಲಾಭವ ಮೀರುವ ಲಾಭವು
ಬೇರಿನ್ನಿಹುದೇ, ಇಂದುಮುಖಿ ?
ಬೃಂದಾವನಕೇ ಹಾಲನು ಮಾರಲು
ಹೋಗುವ ಬಾರೇ ಬೇಗ, ಸಖಿ !'

ಶ್ರೀ ಮಜುಂದಾರರ ಒಂದು ಚಿತ್ರದಿಂದ ಪ್ರೇರಿತವಾದದ್ದು

# ಹಾರೈಕೆ

ನಿನ್ನ ಕಾಣಲೆನ್ನ ಕಣ್
ಕಾತರಿಸುತಿದ!
ನಿನ್ನ ಸೋಂಕಲೆನ್ನ ಮೆಯ್
ಹಾರಯಿಸುತಿದ!
ಬಿಸಿಲಿನುರಿಗೆ ಬೆಂದ ಭೂಮಿ
ಮುಂಗಾರನು ಹಾರುವಂತೆ
ಬಾಯಾರಿದ ಹಸಿದ ಹಸುಳ
ಎದಯು ನೊದಯು ಕೋರುವಂತೆ,
ರಸ ತುಂಬಿದ ಹೊಸ ತಾವರೆ
ಭೃಂಗ ಸಂಗಕೆಳಸುವಂತೆ,
ನೀರಾಳಕೆ ಮುಳುಗಿದವನು
ಉಸಿರಾಡಲು ಹೋರುವಂತೆ,
ನಿನ್ನ ಕಾಣಲೆನ್ನ ಕಣ್
ಕಾತರಿಸುತಿದ!
ನಿನ್ನ ಸೋಂಕಲೆನ್ನ ಮೆಯ್
ಹಾರಯಿಸುತಿದ!

# ವಾಸಕ ಸಜ್ಜಿಕೆ

ಯಾವ ಅತೀತದಿ ನಿರ್ಗುಣನಾಗಿಹೆ
ಓ ಮಮ ಪ್ರೇಮದ ಅತಿಥಿಯೆ ನೀಂ ?
ಗುಣಮಯ ಮಾಯಾ ವನತರು ಮೂಲದಿ
ಕಾದಿಹೆ ವಾಸಕ ಸಜ್ಜಿಕೆ ನಾಂ !
ಕುರುಳನು ತಿದ್ದಿದೆ, ಹೆರಳನು ಹಾಕಿದೆ,
ಬೈತಲೆ ಬಾಚಿದೆ ನಿನಗಾಗಿ ;
ಬಾನಿನ ಬಣ್ಣದ ನೀಲಿಯ ಸೀರೆಯ
ನೆರಿಗೆಯನುಟ್ಟಿಹೆ ನಿನಗಾಗಿ.
ತುಟಿ ಕೆಂಪಾಗಿದೆ ನಿನಗಾಗಿ .
ಕಣ್ಣೆವೆಯಿಕ್ಕದು ನಿನಗಾಗಿ.
ಒಲುಮೆಯ ಹೊಸಲಿನ ರಭಸದ ಹೊಯ್ಲಿಗೆ
ಬಿರಿವೆದೆ ಕರೆಯುತ್ತಿದೆ ಕೂಗಿ !
ಪ್ರಾಣ ಪಕ್ಷಿ ತಾ ದೇಹಪಂಜರದಿ
ತುಡಿಯುತ್ತಿದೆ, ಹಾ, ಸೆರೆಯಾಗಿ !
ಕೈಯಲಿ ಹಿಡಿದಿಹ ಕುಸುಮಮಾಲಿಕೆಯು
ಬಿಸುಸುಯ್ಲಿಗೆ ಬಾಡುವ ಮುನ್ನ
' ನೇತಿ 'ಯ ನಿರ್ಗುಣ ಶೂನ್ಯವನುಳಿಯುತ
' ಇತಿ 'ಯಾಗೈತರು, ಓ ಚಿನ್ನ !

# ರಾಸ ಲೀಲೆ

ವಿಶ್ವದ ಕೇಂದ್ರದ ಬೃಂದಾವನದಲಿ,
ಜೀವನ ಜಮುನೆಯ ಕೂಲದಲಿ,
ರಾಗದ ಭೋಗದ ಮಧು ಸಂಸಾರದ
ಕದಂಬ ತರುವರ ಮೂಲದಲಿ,
ಬಿಸಿಲಿನ ನೆಳಲಿನ ಬಲೆಬಲೆ ನಲಿಯುವ
ರಂಗೋಲಿಯ ಶೀತಲ ಛಾಯೆಯಲಿ,
ಶುಕಪಿಕ ಸಂಕುಲ ತುಮುಲ ನಿನಾದದ
ಸಂಗೀತದ ಮಧುಮಯ ಮಾಯೆಯಲಿ
ಹಚ್ಚನ ಪೆರೆದಿರೆ ವಸಂತ ಲೀಲೆ,
ಪಚ್ಚೆಯ ಹಸುರಿನ ಮೆತ್ತೆಯ ಮೇಲೆ
ನರ್ತಿಸುವನದೊ ತ್ರಿಭಂಗ ಮುರಾರಿ,
ತ್ರಿಲೋಕ ಮೋಹಕ ರಾಸ ವಿಹಾರಿ!

ಸಮುದ್ರ ಮುದ್ರಿತ ಗಿರಿಧರೆಯಂತೆ
ನೀಲ ದುಕೂಲದ ಶ್ಯಾಮ ಶರೀರಿ!
ಸಂಧ್ಯಾ ಸುಂದರ ದಿಗಂತದಂತೆ
ಉಜ್ವಲ ಘನ ವನಮಾಲಾ ಧಾರಿ!
ನಾಟ್ಯಂಗೈದಿದ ಪಿಂಛ ಕಿರೀಟ,
ಪ್ರೇಮಿಕ ಯೋಗಿಯ ಪಿಂಗಲ ಜೂಟ!
ಬಿಂಬಾಧರ ಚುಂಬಿತವಾ ವೇಣು
ರಾಧೆಯ ವಿರಹಕೆ ಕರುಬಿನ ನೇಣು!
ನಳಕೂಬರ ಮನ್ಮಥರವರೆಲ್ಲಿ?
ಸೌಂದರ್ಯದ ಸಾರವಿದೆಲ್ಲಿ?–

ಝುಣಿರು ಝುಣಿರು ಝುಣಿಝುಣಿರೆನೆ ಗೆಜ್ಜೆ
ಕುಣಿದು ಕುಣಿದು ಕುಣಿಕುಣಿದಿವೆ ಹೆಜ್ಜೆ
ಪುಲ್ಕವಿರ್ಸಿಮಿರುತೆ ನಲಿದಿದೆ ಮಣ್ಣು!
ಮೈನವಿರ್ಸಿಮಿರುತೆ ಹನಿತಿವೆ ಕಣ್ಣು!
ನೃತ್ಯಕೆ ಹೊಯಿಕ್ಕೈ ಗಾನದ ಶೈಲಿ;
ಗಾನಕೆ ಹೊಯಿಕ್ಕೈ ನೃತ್ಯದ ಶೈಲಿ!
ಪಿಳ್ಳಂಗೋವಿಯಿನುಗುತಿದೆ ಗಾನಂ
        ಮಳೆಬಿಲ್ಲಿನ ಪೊಳೆಯನು ಹೋಲಿ!
ಸೃಷ್ಟಿಗೆ ಗಾನದ ಗಂಗಾ ಸ್ನಾನಂ!
        ಕಾಣದೊ ಮುಳುಮುಳುಗಿದೆ ತೇಲಿ!

ನರ್ತಿಸಿ ಸುತ್ತಿದೆ ಗೋಪೀವೃಂದಂ
ಲಲನಾಕಾರದ ಪ್ರಣಯಾನಂದಂ!
ಹಗಲಿರುಳೆರಡೂ ಉಷೆ ಸಂಧ್ಯೆಯರಂ
ತಳ್ಕೈಸಿಳೆಯಂ ಭ್ರಮಿಪಂದದಲಿ,
ರಂಗು ರಂಗಿನ ಸೀರೆಯ ಸೊಬಗಿಂ
        ಮೆರೆಯುವ ಹೂದೋಂಟದ ಚಂದದಲಿ,
ಜಗದೆದೆಯಲಿ ರತಿತೃಷ್ಣೆಯ ಕೆರಳಿಸಿ
        ಕುಣಿಕುಣಿವರು ಚಕ್ರದ ಬಂಧದಲಿ!
ಮೃದುಪದ ವಿನ್ಯಾಸಕೆ ಬಳುಬಳುಕಿರೆ ಮೈ,
ಎಲರಲಿ ನಲಿಯುವ ಅಲರ್ವಳ್ಳಿವೊಲಿರೆ ಕೈ
ಝುಣಿರು ಝುಣಿರು ಝುಣಿಝುಣಿರೆನೆ ಗೆಜ್ಜೆ
ಕುಣಿದು ಕುಣಿದು ಕುಣಿಕುಣಿದಿರೆ ಹೆಜ್ಜೆ,

ಗೋಪಿಯರಾದರು ತಿರುಗುವ ನೇಮಿ
ನೃತ್ತದ ವೃತ್ತಕೆ, ಕೇಂದ್ರಸ್ವಾಮಿ
ಶ್ರೀ ಕೃಷ್ಣನು ದಿವ್ಯಪ್ರೇಮಿ!

ಕರಿದುಂಬಿಯ ಪಡೆ ಮುಂಗುರುಳಿನ ಜಡೆ
ಹೆಡೆಯೆತ್ತಾಡುವ ಕಾಳಿಂಗನ ನಡೆ!
ಕೊಂಕಿದ ಹುಬ್ಬಿನ ಕಾಮನ ಬಿಲ್ಲಿಗೆ
ದೃಷ್ಟಿ ಮಯೂಖದ ಬತ್ತಳಿಕೆ
ಬಿಂಕದ ಎದೆಗಡಲುಬ್ಬರವಿಳಿತಕೆ
ಸೃಷ್ಟಿಯ ಪ್ರಾಣದ ತತ್ತಳಿಕೆ!
ಮಧು ಮೃದು ಕೋಮಲ ಪದ ಚುಂಬನಕೆ
ತಲ್ಲಣಿಸಿದ ಭೂಮಿ!
ಹೆಜ್ಜೆಯ ಬಿಜ್ಜೆಯ ಗೆಜ್ಜೆಯ ನಾದಕೆ
ಗಾನ ತರಂಗಿತ ವೇಣು ವಿನೋದಕೆ
ಬ್ರಹ್ಮಾಂಡವೆ ಕಾಮಿ!

ಹಸುರು ಹಸಲೆಯಲಿ ಮೇಯುವ ಗೋವು
ನರೆಯಾಗಿಂಪಿಗೆ ತೊರೆಯುತೆ ಮೇವು
ಕಿವಿಗಳ ನಿಮಿರಿಸಿ ಮೋರೆಯನೆತ್ತಿ,
ಕಂಡರಿಸಿದರೆನೆ ಕಲ್ಲನು ಕೆತ್ತಿ,
ನೋಡದೊ ನಿಂತಿವೆ ಸ್ಮರವಶವಾಗಿ,
ಮೃತ್ಪಟ ಚಿತ್ರದಿ ಕೊರೆದಂತಾಗಿ,
ಸರಗೈದಿರೆ ಕೊಳಲಿನ ಯೋಗಿ!
ರಾಸಕ್ರೀಡೆಯ ನೋಡಲ್ಕೆನಲು,
ಕೊಳಲಿಂಚರವನು ಕೇಳಲ್ಕೆನಲು

ಅದೊ ನಿಂತುದು ಯಮುನೆಯ ಹರಿಹೊನಲು,
ಗಾನಕೆ ಘನವಾಯ್ತೆಂಬಂತೆ!

ತೊರೆ ನೊರೆ ಕರುವಿಟ್ಟಂತಿರೆ ಸೀರ್ವೊಳೆ
ಮೆರೆದಿದೆ ಬಣ್ಣದಿ ಬರೆದಂತೆ!

ಗಿರಿಕಾನನತತಿ ಬಾನ್ ಮುಗಿಲೆಲ್ಲಂ
ಕಿವಿಯಾಗಿವೆ ಮೈಮರೆತಂತೆ!

ಕೊಳಲಿನ ಮಂತ್ರದಿ ತ್ರಿಜಗಂ ಮುಗ್ಧ!
ಸೃಷ್ಟಿ ಸಮಸ್ತಂ ಭಾವಸ್ತಬ್ಧ!
ನಿಶ್ಚಲ ಚಿತ್ರಂ ನೋಡದೊ ಮತ್ತೆ
ರಸಸುಖದಿಂ ಸ್ಪಂದನಗೈಯುತ್ತೆ
ರಾಸ ವಿಲಾಸದ ಛಂದಃ ಪ್ರಾಣಕೆ
ಸಮರಸ ಲಾಸ್ಯವನಾಡುತಿದೆ;
ಭಾವಾತಪದಿಂ ಘನಿತಾನಂದದಿ
ಜೀವತರಂಗಿಣಿ ಮೂಡುತಿದೆ!
ಹರಿಯುತ್ತಿದೆ ಹೊಳೆ ನೊರೆನಗೆ ಬೀರಿ
ತರಂಗತಾಡನ ಘೋಷದಲಿ;
ರಾಜಿಸುತಿದೆ ಮಧು ಕಾನನ ರಾಜಿ
ತೀವಿದ ಪುಷ್ಪಾವೇಶದಲಿ;
ಮಳೆಬಿಲ್ಬಣ್ಣದಿ ಸುರಿಯಲು ತೊಡಗಿದೆ
ಹೂಮಳೆ ಸಮಸ್ತ ದೇಶದಲಿ!
ಬಹುವಿಧ ಸುಮಕುಲ ಗಂಧಸಮೀರಂ
ಚಲಿಸುತ್ತಿಹನಶರೀರ ಮಯೂರಂ!
ಅದೊ ಕುಣಿಯಲು ತೊಡಗಿದೆ ಗಿರಿಪಂಕ್ತಿ,
ಸಾನುಸ್ಥಾನದಿ ವಪ್ರಕ್ರೀಡೆಗೆ
ತೊಡಗಿದುವೋ ಎನೆ ದಿಗ್ದಂತಿ!

ತಾಂಡವಗೈದಿದೆ ಆಮೂ ಅಂಭೋಧಿ,
ರಾಧಾಕೃಷ್ಣರ ರಾಸವಿಲಾಸದ
ರಸ ಪಾನಾನಂದೋನ್ಮಾದಿ!
ಭೂ ಗ್ರಹನಿಕರಂ ರವಿ ತಾರಾಳಿ
ರಾಸಕ್ರೀಡಾವೇಶವ ತಾಳಿ
ಯುಗಯುಗಯುಗದಿಂ ಗಿರ್ರನ ಸುತ್ತಿವೆ,
ಒಂದನ್ನೊಂದಂ ಸೆಳೆದಿವೆ, ಮುತ್ತಿವೆ,
ಎಂದಂದಿಗು ಬಿಡದಾಲಿಂಗನದಿ
ರಹಸ್ಯ ಛಂದೋ ಬಂಧನದಿ!
ನಿಲ್ಲಲ್ ಪ್ರಲಯಂ! ಚಲಿಸಲ್ ಸೃಷ್ಟಿ!
ನೃತ್ಯಗೀತಗಳ ಜೀವನ ತುಷ್ಟಿ!
ಅಣುಅಣುವಿಂ ನೀಹಾರಿಕೆವರೆಗೆ,
ತೃಣಕಣಕಣದಿಂ ಹಿಮಗಿರಿವರೆಗೆ,
ಎಲ್ಲೆಲ್ಲಿಯು ರಾಸಕ್ರೀಡೆ!
ಪ್ರಕೃತಿ ನಿಯಮಗಳೊ? ವಿದ್ಯುಚ್ಛಕ್ತಿಯೊ?
ಬಹುರೂಪಗಳಿವೆ! ಬಹುನಾಮಗಳಿವೆ!
ಆದರೆ ಆದರೆ—ಕಡೆಯಲಿ, ಎಲ್ಲಿಯು
ಎಲ್ಲೆಲ್ಲವು ರಾಸಕ್ರೀಡೆ!

# ಆಕರ್ಷಣೆ

ಧರೆ ಶಶಿಯನೆಳೆವಂತೆ
ನಾ ನಿನ್ನನೆಳೆವೆ;
ರವಿ ಧರೆಯನೆಳೆವಂತೆ
ನೀನೆನ್ನನೆಳೆವೆ!
ಭೀಮ ನೀಹಾರಿಕೆಯು
ಭೂಮಿ ರವಿಗಳನೆಲ್ಲ
ಸೆಳೆಯುವಂದದಲಿ
ಪ್ರೇಮವೆಂಬುವ ಶಕ್ತಿ
ನೇಮದಾಲಿಂಗನದಿ
ಬಂಧಿಸಿದೆ ಸಕಲರನು
ವಜ್ರಬಂಧದಲಿ!

# ನೀನೆನ್ನ ವೈಣಿಕಂ

ನೀನೆನ್ನ ವೈಣಿಕಂ, ನಾ ನಿನ್ನ ವೀಣೆ
ನನ್ನ ಗಾನಕೆ ಅನ್ಯಪ್ರೇರಣೆಯು ಕಾಣೆ!

ಗಾನಕಾಗಿಯೆ ನೀನು ವೀಣೆಯನು ರಚಿಸಿದಯ್,
ಜಡದ ಜಂತ್ರದಿ ಜೀವವನು ಹಡೆದಯಯ್,
ಯುಗ ಯುಗ ತಪಂಬಡುತೆ ದೂರದೀ ಶ್ರುತಿಗಾಗಿ
ತರುಲೋಹದೊಡಲಿದಂ ಕೃತಿಗೆಯ್ದಯಯ್!

ನಿರ್ಜೀವ ತರುವಿನಾ ನೀರಸದ ಲೋಹದಿಂ
ಜೀವರಸಮಯ ಗಾನವಹುದೆಂದರಿತರಾರ್?
ಸಂಭವಮಸಂಭವಮ್ ಎಂಬುದಿಲ್ಲಯ್ ನಿನಗೆ,
ಕವಿವಿರಾಟ್ ಹೇ ವೈಣಿಕ ವರೇಣ್ಯ!

# ವೀಣಾಗಾನ

ನಾನೆ ವೀಣೆ, ನೀನೆ ತಂತಿ
ಅವನೆ ವೈಣಿಕ ;
ಮಿಡಿವನೆನಲು ರಸದ ಹೊನಲು
ಬಿಂದು ಬಿಂದು ಸೇರಿ ಸಿಂಧು
ನಾದ ರೂಪಕ.

ಭುವನವೆಲ್ಲ ಸವಿಯ ಸೊಲ್ಲ
ಕವಿಯ ಗಾನ :
ನನ್ನ ನಿನ್ನ ಹೃದಯಮಾನ-
ಕಲ್ಲಿ ಜೇನ ಸೊಗದ ಸ್ನಾನ;
ಅಮೃತ ಪಾನ.

ತಂತಿಯಿಂಚರದಿ ವಿಪಂಚಿ
ರಸ ಪ್ರಳಯಿಸೆ
ನನ್ನ ನಿನ್ನ ಜೀವಮಾನ
ತಾನ ತಾನ ತನನ ತಾನ
ಪ್ರಾಣ ಪುಳಕಿಸೆ.

# ಶಶಿಕಲಾ

ಪ್ರಣಯಿ ನಿಂತನು ಬಯಲಿನಲಿ ಪೂರ್ಣಿಮೆಯ ಶಶಿಯು
ಹಾರೈಸಿ ಫಾಲ್ಗುಣದ ತಾರಾಖಚಿತ ಸಿರಿಯು
ಪೂರ್ವ ದಿಙ್ನೀಲಾಳಕಾಳಿಯಲಿ ತುಂಬುಪೆರೆ
ಜ್ಯೋತ್ಸ್ನಾ ಸುಧೌತ ಮಾಣಿಕ್ಯದೊಲು ಮೂಡಿಬರೆ
ಕತ್ತಲೆಯ ಮುಡಿಯಲ್ಲಿ ಮುಗಿಲ ಮಲ್ಲಿಗೆಗೊಂಡೆ
ಬೆಳ್ಳನೆ ಬೆಳಗುವಂತೆ, ತೇಲಾಡಿತೆಲ್ಲ ತೆರೆ
ಬೆಳ್ದಿಂಗಳಲಿ ಮಿಂದು! ಹಿಂಜಿದರಳೆಯ ಬಂಡೆ
ಬಾನ್ನೀಲಿ ನೀರಿನಲಿ ತೇಲ್ವಂತೆ ಬಿಳಿಮುಗಿಲು
ಮೆರೆಯೆ, ನಲಿದುದು ನಗುವ ಹುಣ್ಣಿಮೆಯಿರುಳು ಹಗಲು!
ತೀಡಿದುದು ತಂಬೆಲರು ಪ್ರಣಯಿ ಪ್ರಿಯೆಯನು ನೆನೆದು,
ಕಲ್ಪನೆಯ ತೊಟ್ಟಿಲಲಿ ತೂಗುಯ್ಯಲೆಯ ತೊನೆದು,
ನಿಡುಸುಯ್ದು ನಡೆದು ತನ್ನೆಲೆವನೆಗೆ, ಹಾಸಿನಲಿ
ಮೈ ಚಾಚಿದನು ತವಸಿಗೈತಂದ ಕಾಶಿಯಲಿ!

ನಡುರಾತ್ರಿ, ಸದ್ದಿಲ್ಲ, ನಿದ್ದೆಯಲಿ ಮುಳುಗಿತ್ತು
ಜಗವೆಲ್ಲ ಪರ್ಣಶಾಲೆಯೆ ತವಸಿಯಾಗಿತ್ತು!
ಬಾಗಿಲೆಂಬರ? ಅಲ್ಲ! ಆ ಕುಟೀರದ ಕಣ್ಣು
ತೆರೆಯಿತೊಯ್ಯನಿದೇನು! ಭುವನ ಮೋಹಿನಿ ಹೆಣ್ಣು
ಮೂಡಿಹಳು! ಪ್ರಚ್ಛನ್ನಪ್ರಣಯಿಯಾ ಸಂನ್ಯಾಸಿ
ನೋಡಿದರೆ ಝುಳಪಿಸುತ್ತಿದೆ ಮನ್ಮಥ ಕರಾಸಿ,
'ಮದನಾರಿ' ಬಿರುದುಳ್ಳ ವಿಶ್ವೇಶನೂರಿನೊಳೆ,
ಪಾಪಾಪಹಾರಿಣೀ ಗಂಗೆಯಾ ತೀರದೊಳೆ!

ಬೆಳ್ದಿಂಗಳನೆ ಕಡೆದ ಹುಣ್ಣಿಮೆಯ ಬೆಣ್ಣೆಯಲಿ
ಕರವಿಟ್ಟು ಕಯ್ಗೆಯ್ದ ಆ ಹೂವು ಕೆನ್ನೆಯಲಿ
ಪ್ರೇಮ ಮಕರಂದ ತುಂಬಿದ ಜೇನು ಚೆಲ್ಲುತಿದೆ ;
ಹೊನ್ನಾಗಿ ಜೊನ್ನಾಗಿ ಸಂಯಮವ ಕೊಲ್ಲುತಿದೆ ;
ಕರೆದು ಬಗೆಯನು ಕೆಣಕಿ ಕಿತ್ತುಡಿಯ ಗೆಲ್ಲುತಿದೆ ;
ಕದಡುತಿದೆ ಸುಯ್ದೋರಿ ತರುಣಸಂನ್ಯಾಸಿಯೆದೆ !
ಕತ್ತಲೆಯ ಸಾರದಿಂದೆರಕ ಹೊಯ್ದಿರುವಂತೆ
ಕೂದಲಿದೆ. ಕಣ್ಣೊ ತಾವರೆಯಲ್ಲಿ ತುಂಬಿ ಸೆರೆ !
ತುಟಿಯೊ ನ್ಯೆ ಬಳ್ಳಿಯಲಿ ತೊಂಡೆ ಹಣ್ಣಾದಂತೆ !
ತುಂಬೆದೆಯನಾಂತಿರುವ ಕಟಿಯೊ ತಾನೊಂದು ಗೆರೆ !
ಎಲ್ಲ ರಾಗಗಳೆಲ್ಲ ಭೋಗಗಳುಮೊಂದಾಗಿ
ಮುತ್ತಿ ಬಂದಂತಿತ್ತು ತ್ಯಾಗ ಹನನಕ್ಕಾಗಿ !
ಇಂತು ನಿಂತಳು ಚೆಲುವೆ ಮುಗುಳು ನಗೆ ಮೊಗದೋರಿ,
ಮೂಗುತಿಯ ಕಾಂತಿಯನು ಮಿಂಚಿನಂದದಿ ಬೀರಿ !

ನೋಡಿದನು ತವಸಿ ಎವೆಯಿಕ್ಕದೆಯೆ. ' ಯಾರಿವಳು ?
ಮಾನವಿಯೊ? ಮೋಹಿನಿಯೊ ? ಅಪ್ಸರಿಯೊ ? ನಡುವಿರುಳು
ಸಂನ್ಯಾಸಿಯೆಲೆವನೆಗೆ ಬಂದಿಹಳು ! ಕನಸೇನು ?
ಕನಸಲ್ಲ ; ಚೆನ್ನಾಗಿ ಕಣ್ದೆರೆದಿರುವೆ ನಾನು ! '
ಎಂದು ಬಗೆಯುತ್ತಿರಲು ಬೆಚ್ಚಿಬಿದ್ದನು ತ್ಯಾಗಿ
ಇದ್ದಕಿದ್ದಂತೆ ತನ್ನಾ ಪ್ರಿಯೆಯ ಗುರುತಾಗಿ !
ಮಲಗಿರ್ದ ಶಯ್ಯೆಯಿಂದೊಡನೆದ್ದು ಪ್ರೀತಿಯಲಿ :
" ಶಶಿಕಲಾ, ಇಲ್ಲಿಗೆಂತೈತಂದೆ ರಜನಿಯಲಿ ?
ನೂರಾರು ಹರಿದಾರಿಗಳ ದೂರದೂರಿಂದೆ
ಹೇಳಿಲ್ಲಿಗೇತಕ್ಕೆ ಯಾರೊಡನೆ ನೀಂ ಬಂದೆ ? "

‘ ಪತಿದೇವ, ನೀನಗಲಿ ಬರೆ ನಾನು ಬಲುನೊಂದೆ
ಪತಿತವಾಗಲು ಕಾಯ ಕಾಮುಕರ ಬಲದಿಂದೆ
ತೊರೆದದನು ತೊರೆಯಲ್ಲಿ ಬಂದ ಪತಿಸನ್ನಿಧಿಗೆ,
ನನ್ನೆಲ್ಲ ಹರಣದೊಲ್ಮೆಯ ಹಿರಿಯ ರಸ ನಿಧಿಗೆ ’’

ತುಟಿಯುದುರಿ ಎದಬೆದರಿ ಕಣ್ತುಂಬಿ ಕೈಚಾಚಿ
ತಬ್ಬಿದನು ಸಂನ್ಯಾಸಿ ಪ್ರೇಯಸಿಯ ಮೈ ಬಾಚಿ !
ಬೆಚ್ಚಿದನು   ಮಾಯವಾದಳ ? ಎಲ್ಲಿ ಆ ಹೆಣ್ಣು ?
ಕನಸೊಡೆದು ಸೆಜ್ಜೆಯೊಳೆ ತವಸಿ ತೆರೆದನು ಕಣ್ಣು !
ಏಂ ಮಾಯೆ ? ಬೆಳಕಂಡಿಯಲಿ ಚಂದ್ರಿಕೆಯುತೂರಿ
ಕೋಲಾಗಿ ಬಂದು ಬಿದ್ದಿದೆ ಮೊಗಕೆ ! ಇದೆ ನಾರಿ ?

# ದುರ್ದಿನ

ಬಾನಿಗೆ ಹಿಡಿದಿದೆ ಕಿಕ್ಕಿರಿ ಮಳೆಮೋಡದ ಮಬ್ಬು ;
ಗಂಟಿಕ್ಕಿದವೋಲಿದೆ ಸೃಷ್ಟಿಯ ಕರಿಹುಬ್ಬು.
ಮಿಂಚಿನ ಗುಡುಗಿನ ಗಾಳಿಯ ಸುಳಿವಿನಿತಿಲ್ಲ ;
ಚಿತ್ರಸ್ಥಗಿತವೊ ಎಂಬಂತಿದೆ ಜಗವೆಲ್ಲ.
ಗಿಡಮರವೆಲ್ಲಾ ನಿಶ್ಚಲ ಮೇಣ್ ಸ್ತಬ್ಧ ;
ಸದ್ದಿದ್ದರು ಅದು ಹನಿ ; ಕಡಲಾಗಿದೆ ನಿಃಶಬ್ದ.
ಹಿಡಿದು ಹೊಯ್ಯುತಿದೆ ಜಡಿಸೋನೆ,
ಬೇಸರು ಕರೆಕರೆ ಹಿಡಿಸುವ ಎಡೆಬಿಡದೆಯೆ ಸೋರುವ ಸೋನೆ !

ಪ್ರಿಯನಾಗಮನವ ಹಾರೈಸುತ ಮನೆಹೊಸ್ತಿಲ ಮೇಲೆ
ಕುಳಿತಿರುವಳು ದೀನಾನನೆ ಮಲೆನಾಡಿನ ಬಾಲೆ.
ಆ ಹೆಗ್ಗಾಡಿನ ಕಣಿವೆಯ ಮಧ್ಯೆ
ಆ ಒಂಟಿಯ ಹುಲ್ಮನೆ ಮಾಡುತಲಿದೆ ಸಿದ್ದೆ.
ನೆರೆಹೊರೆಯಿಲ್ಲ ; ಜೊತೆಗಾರಿಲ್ಲ ;
ತಾನೊಬ್ಬಳೆ ಎಲ್ಲ !
ನಿಡು ನೋಡುತ್ತಿರೆ ಉತ್ಕಂಠಿತೆ, ಆ ನಾರಿ,
ಹಾವಿನವೊಲು ಹರಿಯುತ್ತಿಹೆ ಕಣಿವೆಯ ಕಾಲ್ದಾರಿ
ಹಳುವಿನೊಳಲ್ಲಲ್ಲಿಯೆ ಮರೆಯಾಗುತೆ ತೂರಿ :
ಶೂನ್ಯತೆ ಮಾತ್ರವೆ, ಹಾ, ಅದರೊಳ್ ಸಂಚಾರಿ !

# ಪ್ರಶ್ನೋತ್ತರ

ಬರ್ಪುದೆಂದಾತಪಂ
ಕರ್ಪಿರುಳ್ ತೆರಳಿ ?
ಫಲಿಪುದಂದೀ ತಪಂ
ಬಗೆಯ ಹೂವರಳಿ ?—

ಜಡತೆಗೂ ಉಂಟಲ್ಲಿ
ಒಂದೇನೊ ಎಲ್ಲಿ ?
ಇಂದೊ ನಾಳೆಯೊ ಬಲ್ಲಿ
ಕಲ್ಲುಸಿರ್ ಆಹಲ್ಯೆ !

# ಹೋದ ಬಾಳ ಬೆಳಕು

ಥಾಮಸ್ ಹುಡ್ ಕವಿಯ 'ದಿ ಲೈಟ್ ಆಫ್ ಆದರ್ ಡೇಸ್'
ಎಂಬ ಕವನದ ಅನುವಾದ

ಸದ್ದೆ ಇಲ್ಲದಿರುಳಿನಲ್ಲಿ
ನಿದ್ದೆ ಹೆಣ್ಣು ಬಂದು ಎನ್ನ
ಮುಗ್ಧನೇತ್ರಗಳಿಗೆ ತನ್ನ
ಮುದ್ದುಮುತ್ತ ಕೊಡುವ ಮುನ್ನ,
ಲೋಲಬಾಲೆ ನೆನಪು ಬಂದು
ಹೋದ ಬಾಳ ಬೆಳಕ ತಂದು
ಚಿತ್ತಭಿತ್ತಿಯಲ್ಲಿ ನಿಂದು
ನಲಿದು ಕುಣಿದು ಹಿಂದುಮುಂದು,
ನಲ್ಮೆದೋರಿ ಮೆರೆವಳು;
ಒಲ್ಮೆದೋರಿ ಕರೆವಳು!
ಅಂದಿನಾಟ,
ಚೆಂದದೂಟ,
ಅಂದಿನೋಟ,
ಕೂಟ, ನೋಟ,
ಕಣ್ಣನೀರು, ಮಂದಹಾಸ,
ಅಣುಗತನದ ಹುಚ್ಚುವೇಷ,
ಅಂದು ಮೆರೆದ ಬೇಟವು,
ಅಂದು ಹೊಳೆದು
ಒಲಿದು ನಲಿದು,

ಇಂದು ಮಣ್ಣು
ಕವಿದ ಕಣ್ಣು,
ಅಂದು ಹರುಷದಿಂದ ನಡೆದು
ಇಂದು ಶೋಕದರೆಗೆ ಬಡಿದು,
ಒಡೆದ ಎದೆಯು ಕೂಟವು!

ಸದ್ದೆ ಇಲ್ಲದಿರುಳೊಳಿಂತು
ನಿದ್ದೆ ಹೆಣ್ಣು ಬಂದು ಎನ್ನ
ಮುಗ್ಧನೇತ್ರಗಳಿಗೆ ತನ್ನ
ಮುದ್ದುಮುತ್ತ ಕೊಡುವ ಮುನ್ನ,
ಖಿನ್ನವದನ ನೆನಪು ಬಂದು
ಹೋದಬಾಳ ಬೆಳಕ ತಂದು
ಚಿತ್ತಭಿತ್ತಿಯಲ್ಲಿ ನಿಂದು
ನಲಿದು ಕುಣಿದು ಹಿಂದುಮುಂದು,
ನಲ್ಮೆದೋರಿ ಮೆರೆವಳು,
ಒಲ್ಮೆದೋರಿ ಕರೆವಳು!

ಹಗಲು ಇರುಳು ಆಟವಾಡಿ
ದಿನವು ಮುದ್ದು ಮಾತನಾಡಿ,
ಒಂದೆ ಜೀವದುಸಿರನೆಳೆದು,
ಒಂದೆ ಬಾಳಿನಲ್ಲಿ ಬೆಳೆದು,
ಮಾಗಿ ಚಳಿಯು ಗಾಳಿ ಬೀಸೆ,
ಮಾಗಿ, ಎಲೆಗಳೆಲ್ಲ ಹಳದಿ-
ಯಾಗಿ ಭೂಮಿಗುದುರುವಂತೆ,
ಸಾಗಿ ಉದುರಿ ಮಾಯವಾದ

ಗೆಳೆಯರನ್ನು ನೆನೆಯಲು,
ಎಳೆಯರನ್ನು ನೆನೆಯಲು ;
ಬೆಳಕ ಕಳೆದು
ಸೊಬಗನುಳಿದು
ಕತ್ತಲಾಗಿ
ಬತ್ತಲಾಗಿ
ತೋರಣಂಗಳಲ್ಲಿ ಕೋವ
ತಳಿರು ಹೂವು ಬಾಡಿ ಹೋದ
ಬಿಟ್ಟ ಮದುವೆಮನೆಯೊಳು,
ಜೊತೆಯು ನೀಗಿ
ಒಂಟಿಯಾಗಿ,
ಬೇಸರಿಂದ,
ಭೀತಿಯಿಂದ,
ಪಾಳುಬಿದ್ದ ಮನೆಯ, ಬಾಡಿ
ನೇತುಬಿದ್ದ ಸೊಬಗ ನೋಡಿ
ಅಳುವ ನೆಂಟನಾಗುವೆ

ಸದ್ದೆ ಇಲ್ಲದಿರುಳೊಳಿಂತು
ನಿದ್ದೆ ಹೆಣ್ಣು ಬಂದು ಎನ್ನ
ಮುಗ್ಧನೇತ್ರಗಳಿಗೆ ತನ್ನ
ಮುದ್ದು ಮುತ್ತ ಕೊಡುವ ಮುನ್ನ,
ಖಿನ್ನವದನೆ ನೆನಪು ಬಂದು
ಹೋದ ಬಾಳ ಬೆಳಕ ತಂದು
ಚಿತ್ತಭಿತ್ತಿಯಲ್ಲಿ ನಿಂದು
ನಲಿದು ಕುಣಿದು ಹಿಂದುಮುಂದು,
ನಲ್ಮೆದೋರಿ ಮೆರೆವಳು ;
ಒಲ್ಮೆದೋರಿ ಕರೆವಳು.

# ಬಾ ಬೇಗನೆ!

ಬೇಸರಿನ ಸಂಜೆಯಿದು, ಬೇಕೆನಗೆ ನಿನ್ನ ಜೊತೆ,
ಎಲ್ಲಿ ಹೋದೆಯೊ, ಇನಿಯ? ಬಾ ಬೇಗನೆ
ಮಬ್ಬು ಕವಿದಿದ ನಭಕೆ, ಮಂಕು ಕವಿದಿದೆ ಮನಕೆ,
ವಿರಹದೆದೆ ಕರೆಯುತಿದೆ! ಬಾ ಬೇಗನೆ

ಮುಳುಗಿದುದು ರವಿ, ಒಕುಳಿಯ ಚೆಲ್ಲಿದುದು ಸಂಧೆ
ಮತ್ತೆಯೊಯ್ಯನೆ ಬೂದಿಯಾಯ್ತು ಕಾಂತಿ
ಕತ್ತಲೆಯ ಕರಿನೆಳಲೊಡನೆ ಮೂಡಿದುವು ತಾರೆ,
ಹಬ್ಬಿಹುದು ಮರುಭೂಮಿಯಂತೆ ಶಾಂತಿ!

ಮನೆಯ ಬಾಗಿಲೊಳೊಬ್ಬಳೆಯೆಕುಳಿತು ಹೊಸ್ತಿಲಲಿ
ಹಾದಿ ನೋಡುತಲಿಹೆನು, ಬಾ ಬೇಗನೆ
ಹೃದಯ ಶೂನ್ಯತೆಯ ಪರಿಹರಿಸಿ ಪೂರ್ಣತೆಯಿತ್ತು
ಮುದಗೊಳಿಸು, ಹೃದಯೇಶ, ಬಾ ಬೇಗನೆ

# ಎಂತು ನೂಂಕಲಿ ನಾಳೆಯೊಂದು ದಿನವನು, ಚೆನ್ನಾ?

ಎಂತು ನೂಂಕಲಿ ನಾಳೆಯೊಂದು ದಿನವನು, ಚೆನ್ನಾ ,
ಯುಗವಾಗಿ ಕಾಣುತಿದೆ ನೀನಿಲ್ಲದೆ ?
ನಾಳೆ ಕಳೆದರೆ ನಾಡಿದ್ದೈತರುವೆ ನೀನೆಂದು,
ಕಾಣುತಿಪೆ ನಾಳೆ ಪಾತಾಳದಂತೆ !

ಹಗಲುಗನಸಿನ ಬನದಿ ಚರಿಸಿ ನಿನ್ನನು ಹುಡುಕಿ
ಕಾಣದಿರೆ ಮರಗಳಡಿ ವಿರಹದಿಂದ
ಕುರುಳ ನೇಣನು ಬಿಗಿದು ಕನಸು ಮರದಾ ಹರೆಗೆ
ಬಾಳ್ಗೊಲೆಯುಗ್ರೈಯಲೇಂ ಮುನಿಸಿನಿಂದ ?

ನಿನ್ನ ವ್ಯೆಯನೆ ನೆನೆದು, ನಿನ್ನ ಹೆಸರನೆ ಕರೆದು,
ನೂರು ಸಾವಿರ ಸಾರಿ ಬರೆದು ಬರೆದು
ವಿರಹಯಾತನೆಯಿಂದ ಹರಿವ ಕಂಬನಿಯಿಂದ
ಮತ್ತೆಮತ್ತಳಿಸಲೇನೆನ್ನ ಚೆನ್ನಾ !

# ಹಂಬಲಿಕೆ

ದಿನವೊಂದಯಾದರೂ ನೀನಿಲ್ಲದಿರೆ ಮನವು
ಕೊರಗುವುದು, ಕುದಿಯುವುದು, ಓ ಎನ್ನ ಮನದನ್ನ !
ಬೇಸರಿಕೆಯಿಂದ ಬೇವುದು ಜೀವ, ಕಾತರಿಸಿ
ಕೋರಿ ಬಾಯಾರುವುದು ಕಣ್ಣು ನಿನ್ನಾಕೃತಿಯ
ಸುಧೆಗೆ, ಓ ಚಿನ್ನ ! ಹೋಗುವೆನು ಎಂದೆನಲು
ಹೋಗು ಎಂಬೆನು ಹೋಗೆ ಕಣ್ಣೀರ ಕರೆಯುವೆನು
ಹಂಬಲಿಸಿ ಹಲುಬಿ ತುಂಬುವುದು ನನ್ನಾತ್ಮವನು
ನಿನ್ನ ನೆನಪೊಂದೆ, ಹೇಳನ್ಯಕ್ಕೆ ತಾನೆಲ್ಲಿ,
ಓ ಎನ್ನ ಚಿನ್ನ ! ಕಷ್ಟದಿಂದುಸಿರೆಳೆವೆ
ನಾಳೆ ನೀಂ ಬರುವೆಯೆಂಬಾಸೆಯಿಂದನ್ನ ರನ್ನಾ !

# ಮೈ ಚೆಲುವಿಗೆ ನೀನೊಲಿಯದಿರೆನ್ನ

ಮೈ ಚೆಲುವಿಗೆ ನೀನೊಲಿಯದಿರೆನ್ನ :
ಇಂದೋ ನಾಳೆಯೊ, ಓ ಮನದನ್ನ,
ಹಿಡಿವುದು ದೇಹಕೆ ಕಾಲದ ತುಕ್ಕು ;
ತೆರೆತೆರೆ ತೋಡುವುದೊಡಲಲಿ ಸುಕ್ಕು
ತುಟಿಗೆಂಪಳಿವುದು ; ಬಾಡುವುದಕ್ಷಿ,
ನರೆವುವು ಕೂದಲು ; ಯೌವನ ಪಕ್ಷಿ
ಗರಿಯುದುರಿಸುವುದು. ಹಿಡಿವುದು ಮುಪ್ಪು
ಬಾಳ್ಸೊಗದಾನೆಯ ಕೆಡಹುವ ಕಪ್ಪು.
ಕೊರಳಿನ ಇನಿದನಿ ಕರ್ಕಶವಾಗಿ,
ಗೂನಾಗುವುದೈ ನಿಡುಬೆನ್ ಬಾಗಿ :
ಅದರಿಂದೊಲಿವೊಡೆ, ಓ ಎದೆಯನ್ನ,
ಮೈ ಚೆಲುವಿಂಗಾಗೊಲಿಯದಿರೆನ್ನ.

# ಪ್ರೇಮವಲ್ಲ, ಬರಿಯ ಕಾಮ

ನಿನ್ನ ಮೇಲೆ ನನ್ನ ಹುಚ್ಚು
ಎನಿತು ದಿನವೂ ನಾನು ಕಾಣೆ!
ನಂದುವನಿತರೊಳಗೆ ಕಿಚ್ಚು
ಮುಗಿದರಡುಗೆ ಲೇಸು, ಜಾಣೆ!

ಬಳಗಿನಲರಿನಂತೆ ಚೆಲುವು
ಏನೊ ಎಂತೊ ಬರಲು ಸಂಜೆ!
ಹುಲ್ಲು ಬೆಂಕಿಯಂತೆ ಒಲವು
ಬಗ್ಗನುರಿದು ಬೂದಿ, ಬಂಜ!

ಮಾಸಬಹುದು ಕೆನ್ನೆಸೊಂಪು,
ಕೆಡಲು ಬಹುದು ಕಣ್ಣಕಾಂತಿ,
ಬಾಡಬಹುದು ತುಟಿಯ ಕೆಂಪು
ಆಗ ಒಲುಮೆ ಬರಿಯ ಭ್ರಾಂತಿ!

ಎಲೆಗಳಿರದ ಬರಲು ಮರದ
ನೆರಳಿನೆಲುಬು ಗೂಡಿನಂತ
ನನ್ನ ಪ್ರೇಮ ಬರಿಯ ಕಾಮ!
ಮುಂದೆ ಮಾಡಬೇಡ ಚಿಂತೆ

ಹುಲ್ಲು ಬೆಂಕಿಯುರಿವತನಕ
ಅದರ ಕ್ಷಣಿಕ ಉಷ್ಣದಲ್ಲಿ
ಕುದಿಯಲೆಮ್ಮ ಕಾಮುಕನಕ
ಪ್ರೇಮ ಎಂಬ ಹೆಸರಿನಲ್ಲಿ!

# ಬಿಂಕದೊಲುಮೆ

ಪಕ್ಕದಲಿ ಪವಡಿಸಿರೆ
ಆಕ್ಕರೆಯ ಚೆಲುವೆ :
ಅಪ್ಸರಿಯರೆದೆಸಿರಿಯ
ಸಕ್ಕರೆಯ ಗೆಲುವೆ ;
ಇಂದ್ರ ಸಿಂಹಾಸನವ
ಸವಿ ಸೂರೆಗೊಳುವೆ ;
ಬೇಸರಿಕೆಯಸುರಿಯನು
ಹೊಡೆಸೀಳಿ ಕೊಲುವೆ !

‘ ಮಿಸುನಿ ಬೆಟ್ಟವನೇರಿ
ಬಸವಳಿದು ಬಾಯಾರಿ
ರಸದ ಮಡುವನೆ ಹೀರಿ
ತಣಿದು ನಲಿವೆ !
ನಂದನವನಲೆದಾಡಿ
ಸುರತರುವನಪ್ಪಾಡಿ
ಸ್ವರ್ಧುನಿಯನೀಸಾಡಿ
ಕುಣಿದು ಉಲಿವೆ !

ಹೊಸ ಮಳೆಯ ಮಿಂದೆಸೆವ
ಹಸುರು ಮಲೆಗಳ ಮೇಲೆ
ನೇಸರುದಯದ ರುಚಿಯ
ಸವಿವೆ ಕಂಡು ;
ಸರ್ವ ಕವಿಗಳ ಕಾವ್ಯ
ಶೃಂಗಾರ ರಂಗದಾ
ಸಂಸಾರ ಸಾರವನು
ಸುಲಿವೆನುಂಡು !

# ಪ್ರಿಯನು ಪ್ರೇಯಸಿಗೆ

ಹಾಲು, ಹೂವು, ಜೊನ್ನ, ಜೇನು,
ಎಲ್ಲ ಸೇರಿಯಾದ ನೀನು !
ಹಾಲಿಗಿಂತ ಕೆನ್ನೆ ಸವಿ,
ಹೂವಿಗಿಂತ ಕಣ್ಣೆ ಸವಿ,
ಜೊನ್ನಕಿಂತ ನಗೆಯೆ ಸವಿ,
ಜೇನಿಗಿಂತ ಮುತ್ತೆ ಸವಿ,
ಹಾಲು ಸವಿ, ಜೇನು ಸವಿ
ಹಾಲು ಜೇನುಗಳನು ಮಿಾರಿ
ನೀನೆ ನನಗೆ ಹೆಚ್ಚು ಸವಿ !

# ಎಂತು ನಿನ್ನನು ಗೆಲುವೆ?

ಕೆಂಪು ಗುಲಾಬಿಯ ಚೆಂದುಟಿ ಚೆಲುವೆ,
ಎಂತು ನಿನ್ನನು, ಹೇಳು, ಗೆಲುವೆ?

ಸುಗ್ಗಿಯ ಹೊಸಸಿರಿ ಹೂಗಳ ಕೊಯ್ದು
ತರಲೇನೊಂದಿನಿಮಾಲೆಯ ನೆಯ್ದು?
ಕಾಜಾಣವು ಕೋಗಿಲೆಗಳ ಬೇಡಿ
ಕಲಿತಿಂಚರದಿಂ, ನಿನ್ನನೆ ನೋಡಿ,
ತುಟಿಯಿಂ ಸೋರುತಲಿರೆ ಸವಿಜೇನು
ಮುದ್ದಿನ ಹೆಸರನು ಕರೆಯಲೆ ಏನು?
ಸೊಬಗಿನ ಕದನದಿ ಮದನನ ಕೊಂದು,
ಸುರಲೋಕದ ವರಗಂಗೆಯ ಮಿಂದು,
ನಂದನದಮೃತದ ಫಲವದ ತಿಂದು,
ನಿನ್ನೆಡೆ ನಿಂತರೆ 'ರತಿ, ಬಾ!' ಎಂದು?
ದಾನವೊ ಮಾನವೊ ಪ್ರಾಣವೊ ಏನು?
ಯಾವುದರಿಂದೆನಗೊಲಿಯುವೆ ನೀನು?

ಕೆಂಪುಗುಲಾಬಿಯ ಚೆಂದುಟಿ ಚೆಲುವೆ
ಎಂತು ನಿನ್ನನು, ಹೇಳು, ಗೆಲುವೆ?

# ನೀನು-ನಾನು

ಷೋಡಶ ಚೈತ್ರದ ಸುಂದರಿ ನೀನು
ಕಾಮನಬಿಲ್ಲಿನ ಬಣ್ಣದ ಬೋನು ,
ನಿನ್ನಾ ಕಣ್ಣು
ದೀಹದ ಹಣ್ಣು ,
ನನ್ನೆದೆ ಹಕ್ಕಿಯೊ ಬಲೆಯಲಿ ಮೀನು !

ಸೋರ್ಮುಡಿಯದೆ ಕರ್ಮುಗಿಲಿನ ಬಾನು ,
ಕಡೆಗಣ್ ನೋಟದಿ ಮಿಂಚಲು ನೀನು
ಚುಂಬನ ದಾನಕೆ
ಪ್ರೇಮದ ಪಾನಕೆ
ಕಾತರವಾಗಿಹ ಚಾತಕ ನಾನು !

ರಸಮಯ ಶೃಂಗಾರಾನನೆ, ನೀನು
ಚೈತ್ರದ ಹುತ್ತದ ಹುಣ್ಣಿಮೆ ಜೇನು
ಪಂಕಜನೇತ್ರೆ,
ಮಧುನವಪಾತ್ರೆ,
ದುಮುಕುವ ದುಂಬಿಯು ನಾಲಗೆ ನಾನು !

ವಿದ್ಯುದ್ ಭೀಷಣ ಮೋಹಿನಿ, ನೀನು
ಕದ್ದಿಂಗಳ ಕಗ್ಗತ್ತಲ ಬಾನು,
ಅಲ್ಲುರಿವುಳ್ಕೆ
ಒಲ್ಮೆಯ ಬಾಳ್ಕೆ ,
ರಾಗದ ಬೆಂಕಿಯು ಬೂದಿಯೆ ನಾನು !

ಶಾಶ್ವತ ಸೌಂದರ್ಯದ ಖನಿ ನೀನು,
ನಶ್ವರ ಚಾಂಚಲ್ಯದ ಹನಿ ನಾನು ;
ಚೆಂದುಟಿ ಮುತ್ತು
ಗರಳದ ತುತ್ತು ;
ನೀನೆನ್ನಯ ಸರ್ವಸ್ವದ ಮೃತ್ಯು !

# ಮುಳುಗಿದರೇನ್ ಸಾವೆ ?

ಬೆಳ್ದಿಂಗಳು ಹಾಲ್ ಚೆಲ್ಲಿದ
ಹುಣ್ಣಿಮೆಯಿರುಳಲ್ಲಿ
ಬನದಂಚಿನ ಹೊಳೆ ತುಂಗೆಯ
ಸಕ್ಕರೆ ಮರಳಲ್ಲಿ
ಓರೊರ್ವರೆ ಸಾವಿರ್ವರು
ಸಿಂಗಾರದಿ ಕೂಡಿ
ನಲಿದಾಡುವ ಬಾ ನಲ್ಲಳ,
ರಸದೋಕುಳಿಯಾಡಿ

ಮೇಗಡೆ ಬಾನ್, ಕೆಳಗಡೆ ಕಾನ್,
ಜೊನ್ನದ ಜೇನ್ ನಡುವೆ,
ನಿನ್ನೊಳು ನಾನ್, ನನ್ನೊಳು ನೀನ್,
ನಮಗಿನ್ನೇನ್ ಗೊಡವೆ ?
ಹೊನ್ನೊಲುಮೆಯ ಹೊಂಬೊನಲಲಿ
ತೇಲುವ ಬಾಳ್‌ನಾವೆ
ಆಲಿಂಗನದಾವರ್ತದಿ
ಮುಳುಗಿದರೇನ್ ಸಾವೆ ?

# ಈ ಸುಂದರ ಸಂಜೆ ಬರಿ ಬಂಜೆ

ಈ ಸುಂದರ ಸಂಜೆ,
ಬರಿ ಬಂಜೆ :
ನೀನಿಲ್ಲದೆ, ನಲ್ಲೆ,
ನಾ ಬಲ್ಲೆ !

ಹೊಲಗಳ ಸಿರಿಸೊಂಪು
ಕಣ್ಗಿಂಪು !
ಚೆಂಬಿಸಿಲಿನ ಶಾಂತಿ
ನಗೆ ಕಾಂತಿ !

ಕಣಿವೆಯ ತೋಪಿನಲಿ
ಪಸುರಿನಲಿ
ಕೋಗಿಲೆಯುಲಿಯುತಿದೆ ;
ನಲಿಯುತಿದೆ !

ನೀಲಿಯ ದೂರದಲಿ
ಗಿರಿಪಂಕ್ತಿ
ಗಗನದ ತೀರದಲಿ
ದಿಗ್ದಂತಿ !

ದೆಸೆಯೊಳೂ ಸೊನ್ನೆ,
ಓ ರನ್ನೆ ;
ಎಂಟನೆಯದು ಮಾತ್ರ
ಮಧುಪಾತ್ರ !

ಮನೆಯಿದೊ ‘ ಉದಯರವಿ ’ !
        ವಿರಹಿ ಕವಿ !
ಪಶ್ಚಿಮದಸ್ತ ಛವಿ
        ಪಾಳು ಗವಿ !

ಈ ಸುಂದರ ಸಂಜ,—
        ಬರಿ ಬಂಜೆ
ನೀನಿಲ್ಲದ, ನಲ್ಲೆ,
        ನಾ ಬಲ್ಲೆ !

# ತೆರೆದಿದೆ ಮನೆ, ಓ, ಬಾ ಅತಿಥಿ!

ತೆರೆದಿದೆ ಮನೆ, ಓ, ಬಾ ಅತಿಥಿ !
ಹೊಸಬೆಳಕಿನ ಹೊಸಗಾಳಿಯ ಹೊಸಬಾಳನು ತಾ, ಅತಿಥಿ!

ಎಲ್ಲಾ ಇದೆ ಇಲ್ಲಿ ;
ಉಲ್ಲಾಸವೆ, ಹಾ, ಕುಡಿಮುರುಟಿದ ಬಳ್ಳಿ !
ದೈನಂದಿನದತಿಪರಿಚಯ ಮಂದತೆಯನು ತಳ್ಳಿ
ಬಾ, ಚಿರ ನೂತನತೆಯ ಕಿಡಿ ಚೆಲ್ಲಿ,
ಓ ನವಜೀವನ ಅತಿಥಿ !

ಆವ ರೂಪದೊಳು ಬಂದರು ಸರಿಯೆ
ಬಾ ಅತಿಥಿ !
ಆವ ವೇಷದಲಿ ಏಂದರು ಸರಿಯೆ
ನೀನತಿಥಿ !
ನೇಸರುದಯದೊಲು ಬಹೆಯಾ ? ಬಾ, ಅತಿಥಿ !
ತಿಂಗಳಂದದಲಿ ಬಹೆಯಾ ? ಬಾ, ಅತಿಥಿ !
ಇಷ್ಟ ಮಿತ್ರರೊಲು ? ಬಂಧು ಬಳಗದೊಲು ?
ಸುಸ್ವಾಗತ ನಿನಗತಿಥಿ !
ಕಷ್ಟದಂದದಲಿ ? ನಷ್ಟದಂದದಲಿ ?
ಸ್ವಾಗತವದಕೂ ಬಾ, ಅತಿಥಿ !

ಇಂತಾದರು ಬಾ ; ಅಂತಾದರು ಬಾ ;
ಎಂತಾದರು ಬಾ ; ಬಾ, ಅತಿಥಿ !
ಬೇಸರವಿದನೋಸರಿಸುವ ಹೊಸ ಬಾಳುಸಿರಾಗಿ,

ಬಾ, ಅತಿಥಿ!
ಹಾಡುವ ಹಕ್ಕಿಯ ಗೆಲುವಾಗಿ, ಬಾ ಅತಿಥಿ!
ಮೂಡುವ ಚುಕ್ಕಿಯ ಚೆಲುವಾಗಿ, ಬಾ ಅತಿಥಿ!
ಕಡಲಾಗಿ,
ಬಾನಾಗಿ,
ಗಿರಿಯಾಗಿ,
ಕಾನಾಗಿ,
ಚಿರನವಚೇತನ ಝರಿಯಾಗಿ,
ಬೇಸರವನು ಕೊಚ್ಚುತ್ತೆ ಬಾ, ಅತಿಥಿ!
ಉಲ್ಲಾಸದ ರಸಬುಗ್ಗೆಯ ಚಿಮ್ಮಿಸಿ ಬಾ, ಅತಿಥಿ!
ವಿಷಣ್ಣತೆಯನು ಪರಿಹರಿಸಿ
ಪ್ರಸನ್ನತೆಯಾ ಸೊಡರುರಿಸಿ,
ಮನಮಂದಿರದಲಿ ಮಧುರತಿಯಾರತಿಯೆತ್ತುತೆ
ಬಾ, ಅತಿಥಿ!
ತೆರೆದಿದೆ ಮನೆ, ಓ, ಬಾ ಅತಿಥಿ!
ಹೊಸತಾನದ ಹೊಸಗಾನದ ರಸಜೀವವ ತಾ ಅತಿಥಿ!

# ಮೊಸರಿನ ಹುಡುಗಿ

ಮೊಸರಿಗಿಂತ ಮನೋಹರ ಅವಳ ಕೂಗು ;
'ಮೊಸರು ಬೇಕೆ ಮೊಸರು' ಎಂಬ ದನಿಯ ಬಾಗು !
'ಮೊಸರು ಬೇಡ' ಎಂಬರುಂಟೆ? ಕರೆ, ಹೋಗು :
ಕೊರಳ ಸವಿಗೆ ಮೊಸರು ಕೊಂಡು ಧನ್ಯನಾಗು !

# ಸಾಕು ಈ ಏಕಾಂತ

ನಿನ್ನ ಜೊತೆಯಿಲ್ಲದೇಕಾಂತವಿದು ಕೊರೆಯುತಿದೆ
　　ಹೃತ್ಕಮಲವನು ವಜ್ರಕೀಟದಂತೆ,
ಮುಂದ ಬರುವನ್ನುತಕಿದು ಪೀರಿಕೆಯೊ ನಾನರಿಯೆ,
　　ದಹಿಸುತಿಹುದಾ ಕಾಳಕೂಟದಂತೆ!
ಮುಳುಗಿದನು ಸಂಜೆರವಿ, ಬೈಗುಗಪ್ಪಿಳಿತಂದು-
　　ದುಬ್ಬುತಗ್ಗನು ತುಂಬಿ ಸಮುಗ್ಗೈಯುತ,
ತಬ್ಬಲಿಯ ತೆರದಿ ನಾನೊಬ್ಬನೆಯೆ ನಿಂತಿಲ್ಲಿ
　　ನೆನೆವೆ ನಿನ್ನನು, ನಲ್ಲೆ, ಬಿಸುಸುಯ್ಯುತ!
ಸಾಕು ಈ ಏಕಾಂತ! ಅಯ್ಯೊ ಸಾಕೇಕಾಂತ!
ಪ್ರೇಮವಿಲ್ಲದ ನರಕ ಈ ಒಂಟಿ ವೇದಾಂತ!

# ಆಶೆ ಸ್ವಪ್ನ ಚುಂಬಿ

ಅಲ್ಲಿ ಅರಳಿದೆ ಹೂವು, ಮಕರಂದ ತುಂಬಿ ;
ಇಲ್ಲಿ ಬಾಯಾರಿ ಹಾರಾಡುತಿದೆ ದುಂಬಿ.
ಅಂತರವೊ ? ಇನ್ನೂರು ಮೈಲಿಗಳ ಕಂಬಿ,
ಅಲ್ಲಾಡದಿರುವ ಕಬ್ಬಿಣದ ಕಂಬಿ !
ದೇಶವನು ಕಾಲಗೆಲ್ಲುವುದೆಂದು ನಂಬಿ
ಆಶೆ ಕುಳಿತಿಹುದಿಲ್ಲಿ ಸ್ವಪ್ನ ಚುಂಬಿ !

# ನಾಕ—ನರಕ

ಅವಳು ನಾಕ , ಅವಳು ನರಕ
ನಾಕ—
ಜೊತೆಯೊಳಿದ್ದರೆ ,
ನರಕ—
ದೂರ ಹೋದರೆ !

# ಯಮನಲ್ಲಿ ಭಿಕ್ಷೆ

ಈ ಕೊಂದ ಕಾಲವನು ಕೂಡಿ ಕೊಡುವೆಯು ಕೊನೆಗೆ

ನನ್ನಾಯುಮಾನಕ್ಕೆ, ಮೃತ್ಯುದೇ[illegible] ?

ಏಕೆಂದರಿಷ್ಟು ದಿನವೂ ನಾನೆ ಸತ್ತಿದ್ದೆ !

(ನೀನೊಯ್ಯುದಿದ್ದರೂ ನಾನಲ್ಲಿ ಬಂದಿದ್ದೆ !)

ನಲ್ಲಳನು ಕರೆದೊಯ್ಯೆ ಮನೆಗೆ ಮಾವ !

# ಪ್ರವಾಸ

ನಿನ್ನ ಮಂದಸ್ಮೇರ ಜೊತೆಯಿರದ ಕಾಶ್ಮೀರ
 ನನಗಹುದು ನಿಸ್ಸಾರ, ನಾನು ಬಲ್ಲೆ
ಕನ್ನಡದ ಮಲೆನಾಡ ಗೆಲುವ ಸೊಬಗಿನ ಬೀಡ
 ನಿನ್ನುಳಿದು ನಾ ನೋಡಲಾರೆ, ನಲ್ಲೆ

ನಾವಿರುವ ಈ ನೆಲದ ಮೇಲಿರುವ ಬಾಂಬೊಲದ
 ಮೋಡಗಳ ನೋಡುವುದನರಿಯುತಿಲ್ಲೇ
ಎಲ್ಲ ದೇಶಗಳೆಲ್ಲ ಚೆಲುವ ಸವಿಯಲು ಬಲ್ಲ
 ಕಬ್ಬಿಗಗೆ ಬೇಕಿಲ್ಲ ದೂರ ಜಿಲ್ಲೆ

# ಕವಿಯ ಪ್ರೇಮ

ಕವಿಯ ಹೃದಯ ಜ್ವಾಲಾಮುಖಿ;
ಪ್ರೇಮವದರ ಉದರ ಶಿಖಿ.
ಮಧುರ ಭಾವ, ಕಾಯ್ದ 'ಲಾವ'
    ಕರಗಿ ಹರಿವ ತೆರದಲಿ,
ಧಮನಿಧಮನಿಗಳಲಿ ತೂರಿ
ಧಗಿಪುದಿರಿವೊಲುರಿಯ ಚೂರಿ
    ರಾಗ ರತಿಯ ಭರದಲಿ!

ಅಲ್ಪ ಸ್ವಲ್ಪ ಸಾಲದದಕೆ;
ಬೇಕು ನಿನ್ನ ಇಡಿಯ ಬದುಕೆ.
ಮೊನ್ನೆ ಕಣ್ಣುತೆರೆದ ಹೆಣ್ಣೆ
    ಸುಂಕ ಕೊಟ್ಟ ಮಾತ್ರಕೆ
ಹೇರಿನ ಹೊರೆ ಹಗುರವಾಯ್ತೆ?
ಬಡ್ಡಿ ತೆತ್ತರೂನವಾಯ್ತೆ
    ಋಣದ ಮೂಲಗಾತ್ರಕೆ?

ತ್ಯಾಗಕಿಂತ ಭೋಗವಿಲ್ಲ,
ಭೋಗಕಿಂತ ತ್ಯಾಗವಿಲ್ಲ;
ಪೂರ್ಣ ತ್ಯಾಗ ಪರಮ ಭೋಗ
    ಪ್ರೇಮಸ್ವಾಮೃತ ಲೋಕದಿ!
ರಸಪ್ರಣಯ ಪರಸ್ಪರತೆ
ಪುರುಷಾರ್ಥಂ ಬತ್ತದೊರತೆ
    ದಾಂಪತ್ಯದ ನಾಕದಿ!

ಕವಿಯ ಶಾಂತಿ ಬರಿಯ ಭ್ರಾಂತಿ !

ಅವನ ಬದುಕನಂತ ಕ್ರಾಂತಿ !

ಬಾಯಾರಿಕೆಗೆಣೆ ಕೋರಿಕೆ

ಮರುಭೂಮಿಯ ಚಿರತೃಷೆ

ಹನಿಹನಿಯನೆ ಹೀರಿದರೂ

ಕಡಲೇಳೂ ಆರಿದರೂ

ತಣಿಯದೊಲವಿನೆದೆಮಸೆ !

# ಮೈಗೆ ಮೈ ಸೋಂಕಿದರೆ

ಮೈಗೆ ಮೈ ಸೋಂಕಿದರೆ
ನಂದನವೊ ನಮ್ಮ ಧರೆ!
ಮೈಗೆ ಮೈ ಸೋಂಕಿದರೆ
ದೇವಗಂಗೆಯಲಿ ತೆರೆ
ಪುಲಕಿಸುವುದುಕ್ಕಿ!

ಮೈಗೆ ಮೈ ಸೋಂಕಿದರೆ,
ಮೈಗಳೆರಡಪ್ಪಿದರೆ,
ಒಲಿದೊಪ್ಪಿದಪ್ಪಿನಲಿ
ದ್ವೈತವದ್ವೈತದಲಿ
ಲೀನ ಧುಮ್ಮಿಕ್ಕಿ!

# ಗುರುಕೃಪೆ

ದೇವರಮನ ಕಡೆ ನೋಡುತ್ತಿರೆ ನಾ
ಧ್ಯಾನಾನಂದದಲಿ
ಬಂಧಿಸಿ ಹೃದಯುವ ಬಂದುದು ಗುರುಕೃಪೆ
ಸುಂದರಿಯುಂದದಲಿ !
ಸಿರಿಸಿರಿ ಮೆರೆದುದು ನೀಲಿಯ ಸೀರ
ಶರಧಿಯನುಟ್ಟಳೆ ಭೂಮಿಯ ನೀರೆ ?

ಮಂಗಳದಾರತಿ ಬಲಗೈಯಲ್ಲಿ,
ಹೂವೆಡಗೈಯಲ್ಲಿ ,
ಮಾಂಗಲ್ಯದ ತೋಳ್ಸರೆ ಕೊರಳಲ್ಲಿ,
ಬಿಡುಗಡೆ ಎದೆಯಲ್ಲಿ !
ಚಂದ್ರಮುಖದಲ್ಲಿ ತಾರೆಯ ಬಿಂದು ,
ಚಂದ್ರೋದಯದಲಿ ಮಿಂದುದೆ ಸಿಂಧು ?

ತುಟಿ ಕಾವಲ್ ನಿಂದುದು ನಂದನಕೆ ,
ಕದವಾದುದು ಕಣ್ಣು ,
ಮೋಹಿಸಿ ಭಕ್ತಿಯ ಮಧು ಬಂಧನಕೆ
ಕೃಪೆ ಆದುದು ಹೆಣ್ಣು !
ಗುಡಿಯಿಂದೀ ಪರಿ ತಾನೊಲಿದಾಕೆ
ನಡೆತರ, ಬೇರೆಯ ಗುರುಕೃಪೆ ಬೇಕೆ ?

# ನನ್ನ ವಳಿಗೆ

ಗುರುವು ಕೊಟ್ಟ ಪರಮ ಭಿಕ್ಷೆ
ನೀನೆ ನನಗೆ ಧರ್ಮರಕ್ಷೆ;
ನಿನ್ನ ನೆನಪೆ ನೀತಿ ಶಿಕ್ಷೆ
ಪ್ರೇಮದೆನ್ನ ಹೃದಯಕೆ!–
ನೀನೆ ದಿಶಾದೇವಿಯಲ್ತೆ
ಪೂರ್ಣಚಂದ್ರನುದಯಕೆ!

# ರಸಪೂಜೆ

ನಿನ್ನ ಮೈ ದೇಗುಲದಿ
  ನಾನು ಪೂಜಾರಿ ,
ನೀನೆ ದೇವತೆ ಅಲ್ಲಿ,
  ನನ್ನೆದಯ ನಾರಿ

ಪ್ರೇಮದಾಲಾಪನೆಯೆ
  ಋಷಿಮಂತ್ರದೋಜೆ ,
ಪ್ರಣಯಪ್ರಸಾದದಿಂ
  ತಣಿಯುವುದೆ ಪೂಜೆ !

# ಅಮೃತ—ವಿಷ

ಜಾರುತಿದೆ ಜೀವನದ
ನಶ್ವರದ ಕಾಲನದಿ ;
ದಿನ ದಿನಕೆ ಹತ್ತಿರಕೆ
ಸಾರುತಿದೆ ನೀರನಿಧಿ.
ಮತ್ತೆ ಬಾರದು, ನಲ್ಲೆ,
ಕಳೆದ ನಿಮಿಷಂ.
ಹೊತ್ತ ಕೊಲೆಗೈಯುವನೆ
ತಿಳಿದ ಮನುಷಂ?
ನಾಚಿ ನಿಂತರೆ, ಅಯ್ಯೊ,
ಅಮೃತವೆ ವಿಷಂ!

# ಇಂದಾಗಲಿ

ಮಲಗು ಮನದನ್ನೆ, ಮಲಗೆಲೆಗೆ ಚಿನ್ನೆ
ಕೊಳದ ತಾವರೆಯ ಹೃದಯದಲಿ ತುಂಬಿ
ಸರೆಯಾಗಿದೆ.

ಮಲಗು ಮನದನ್ನೆ, ಮಲೆಯ ಜೇನನ್ನೆ,
ದಣಿದ ರವಿಬಿಂಬವದ್ರಿಮುಂಚದಲಿ
ಮರೆಯಾಗಿದೆ

ಮಲಗು ಮನದನ್ನೆ, ನನ್ನಿನಿಯ ಕನ್ನೆ,
ಬನಬನದ ತೇಲಿ ಅಲೆವ ತಂಗಾಳಿ
ತಂಪಾಗಿದೆ

ತಿಂಗಳಿನ ಸೊಂಪು, ತೇನೆಯುಲಿಯಿಂಪು,
ಕೇತಕಿಯ ಧೂಳಿ ತುಂಬಿದೀ ಗಾಳಿ
ಕಂಪಾಗಿದೆ

ಮಲಗು ಮನದನ್ನೆ, ಮಲಗನ್ನ ಚನ್ನೆ,
ನಿನ್ನ ಹೂಗೆನ್ನೆಗಳಲೆನ್ನ ಕೆನ್ನೆ
ಒಂದಾಗಲಿ,

ಮಲಗು ಮಲಗೆನ್ನೆ, ಬಾಳಿರುಳ ಜೊನ್ನೆ
ಅಂದಿಂದು ನಿನ್ನೆ ನಾಳೆಯಲಿ ಸೊನ್ನೆ,
ಇಂದಾಗಲಿ!

# ಅಮೃತ ಪಾನ

ತಾರಕ ನಾಕದಿ ವರ್ಷಗಳೈದನು
ಹರ್ಷದಿ ನೂಕಿದೆನು ;
ಜೀವನ ಪಂಕದಿ ಜೀವದ ಕಮಲವ
ಪ್ರೇಮದಿ ಸಾಕಿದೆನು.
ಕೆಸರಿನೊಳಳಿಯುತಲಿದ್ದಾ ಹೂವನು
ನೀ ಮುದ್ದಿಸಿ ಮುಡಿದೆ ;
ಮರ್ತ್ಯನಾದರೂ ಗೆದ್ದೆನು ಸಾವನು :
ನಿನ್ನಮೃತವ ಕುಡಿದೆ !

# ಅಮೃತಸುಖ

ನವಿಲಿನ ಕೊರಳಿನ ಬಣ್ಣದ ಸೀರೆ,
ಹೊಂದಾವರೆ ಹೂವಿನ ಗೆರೆಯಂಚು
ಬೆನ್ನಿರುಹುತೆ ಕುಳಿತಿದ್ದಳು ಸೀರ
ಸಾಗಿದ್ದಿತು ಹಸುಳೆಯು ತಾಯಿಯ ಹಾಲೊಳಸಂಚು !

ಬಾಚಿದ ಹಿಂದಲೆ ಕದ್ದಿಂಗಳ ಹೆಡ,
ಹಾವೆನಲಿಳಿದಿದೆ ಬೆನ್ನಿನ ಮೇಲ್ ಜಡೆ
ಮುಡಿಯಲಿ ಮೂಬಣ್ಣದ ಹೂಕುಚ್ಚು,
ಕೆಂಪಿದೆ, ಬಿಳಿಯಿದ, ಹಸುರಿದೆ-ಕಬ್ಬಿಗನೆದಮೆಚ್ಚು !

ಮೂದಿಂಗಳ ಕಂದನ ಹೂಗಾಲು,
ಒಳಸಂಚನು ಹೊರಗೆಡಹುವವೋಲು
ಅಂಚಲದೊಳಗಿಂ ಕಟಿತಟದಲ್ಲಿ
ಇಣಕಿರೆ,-ಮುಳುಗಿದೆ ನಾನೂ ಅಮೃತದ ಸುಖದಲ್ಲಿ !

# ಮುಗಿಲ ಲೀಲೆ

" ಬಾನಿನ ಜಗಲಿಯ ನೀಲಿಯಲಿ
ಬಿಳಿಮುಗಿಲಿನ ಕೂಸಾಡುತಿದೆ !"

" ಹಡಗಿನ ಪಟ ಹಿರಿ ಕಡಲಿನಲಿ
ಗುರಿಯಿಲ್ಲದೆ ತೇಲಾಡುತಿದೆ ! "

" ಯಮುನೆಯ ನೀರಿನ ಹೊನಲಿನಲಿ
ನಿಡ್ಡೆಯ ಹಂಸವು ತೇಲುತಿದೆ ! "

" ನೀಲಿಯ ತೈಲದ ಬಟ್ಟಲಲಿ
ಬೆಣ್ಣೆಯ ಮುದ್ದೆಯ ಹೋಲುತಿದೆ ! "

" ಹಸುರನು ಹಾಸಿದ ತೊಟ್ಟಿಲಲಿ
ಬಿಳಿಗನಸಿನ ಸಿಸು ನಿದ್ರಿಸಿದೆ ! "

" ಅಮ್ಮನ ಕಣ್ಣಿನ ಕಪ್ಪಿನಲಿ
ತಮ್ಮನ ಚಿತ್ರವು ಮುದ್ರಿಸಿದೆ ! "

" ಮುಗಿಲಾಡುತಿದೆ ! "
" ಮುಗಿಲೋಡುತಿದೆ ! "

# ಹುಟ್ಟಿದ ಹಬ್ಬದ ಹರಕೆ

" ಜೀವಿತ ಪಥವಾಗಲಿ ನಿನಗಿವರೆಲ್ಲರ
ಆಶೀರ್ವಾದದ ರಥರೇಖೆ "

ಕಂದಾ, ನಿನಗಿದೆ ತಾಯ್‌ತಂದೆಯ ಹರಕೆ,
ಹುಟ್ಟಿದ ಹಬ್ಬಕೆ ಕಬ್ಬಿಗನೆದೆಯರಕೆ
ಜೀವಿತ ಪಥವಾಗಲಿ ನಿನಗಿವರೆಲ್ಲರ
ಆಶೀರ್ವಾದದ ರಥರೇಖೆ,
ಕಪಿ ಋಷಿ ಗುರುವರ ದೇವ ಮಹಾತ್ಮರ
ಜೀವಜ್ಯೋತಿಯ ಧ್ರುವರೇಖೆ !

# ಮೊದಲ ಚರಣಗಳು